॥ ಶ್ರೀಮನ್ಮೂಲರಾಮೋ ವಿಜಯತೇ ॥ ಭಾಗ-1 ॥ ಶ್ರೀ ಗುರುರಾಜೋ ವಿಜಯತೇ ॥

# ತತ್ವಪ್ರಕಾಶಿಕಾ
# ಭಾವದೀಪ

ಬ್ರಹ್ಮಸೂತ್ರ, ಬ್ರಹ್ಮಸೂತ್ರಭಾಷ್ಯ, ತತ್ವಪ್ರಕಾಶಿಕಾ ಇವುಗಳೊಂದಿಗೆ
ಶ್ರೀ ಮಂತ್ರಾಲಯ ಪ್ರಭುಗಳ ಭಾವದೀಪ ಗ್ರಂಥದ ಸಂಸ್ಕೃತ ಮೂಲ ಹಾಗೂ ಕನ್ನಡ ಅನುವಾದ

**ವಿಶೇಷವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ**


ಅಧ್ಯಕ್ಷರು

**ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದರು**
ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ

ಗೌರವ ಸಂಪಾದಕರು

**ವಿ॥ ರಾಜಾ ಎಸ್. ಗಿರಿಆಚಾರ್ಯರು**
ಮಂತ್ರಾಲಯ

ಅನುವಾದ ಮತ್ತು ವಿವರಣೆ

**ವಿ॥ ಬೆಮ್ಮತ್ತಿ ವೆಂಕಟೇಶಾಚಾರ್ಯ**
ಬೆಂಗಳೂರು



ಪ್ರಕಾಶನ

**ಶ್ರೀ ಗುರುಸಾರ್ವಭೌಮ ಸಂಶೋಧನಾ ಮಂದಿರ**
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ
ಶ್ರೀ ರಾಘವೇಂದ್ರಸ್ವಾಮಿಗಳ ಮಠ,
ಮಂತ್ರಾಲಯ - 518 345 (A.P.)

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀ ಗುರುರಾಜೋ ವಿಜಯತೇ ॥

ಭಾಗ -೧

ತತ್ವಪ್ರಕಾಶಿಕಾ

# ಭಾವದೀಪ

## ಜಿಜ್ಞಾಸಾಧಿಕರಣ, ಜನ್ಮಾದ್ಯಧಿಕರಣ, ಶಾಸ್ತ್ರಯೋನಿತ್ವಾಧಿಕರಣ, ಸಮನ್ವಯಾಧಿಕರಣ

* * * * * *


ಅಧ್ಯಕ್ಷರು :

ಶ್ರೀ ಸುಬುಧೇಂದ್ರತೀರ್ಥಶ್ರೀಪಾದರು

ಪೀಠಾಧಿಪತಿಗಳು, ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ.

ಗೌರವ ಸಂಪಾದಕರು:

ವಿ॥ ರಾಜಾ ಎಸ್. ಗಿರಿ-ಆಚಾರ್ಯ

ಮಂತ್ರಾಲಯ

ಅನುವಾದ ಮತ್ತು ವಿವರಣೆ:

ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು


\- - - - - -


ಪ್ರಕಾಶಕರ :

ಶ್ರೀಗುರುಸಾರ್ವಭೌಮಸಂಶೋಧನಾಮಂದಿರ,

ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,

ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 (A.P.)

'ಭಾವದೀಪ' ಜಯನಾಮಸಂವತ್ಸರ ಭಾದ್ರಪದ ಶುದ್ಧ ಅನಂತಚತುರ್ದಶಿ (ದಿನಾಂಕ : ೦೮-೦೯-೨೦೧೪) ಶುಭಮುಹೂರ್ತದಲ್ಲಿ ಶ್ರೀರಾಘವೇಂದ್ರಸ್ವಾಮಿಗಳ ಪವಿತ್ರಕ್ಷೇತ್ರವಾದ ಮಂತ್ರಾಲಯದಲ್ಲಿ ಶ್ರೀ ರಾಘವೇಂದ್ರಸ್ವಾಮಿಗಳ ಮಠಾಧೀಶರಾದ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂರಿಂದ ಗುರುಗಳ ಅಂತರ್ಯಾಮಿಗಳಾದ ಮೂಲರಾಮಚಂದ್ರದೇವರಿಗೆ ಸಮರ್ಪಣೆ ಮಾಡುವ ಮೂಲಕ ಬಿಡುಗಡೆ ಮಾಡಲಾಯಿತು.

ಪ್ರಕಾಶನ : ಶ್ರೀಗುರುಸಾರ್ವಭೌಮಸಂಶೋಧನಾಮಂದಿರ,
ಜಗದ್ಗುರು ಶ್ರೀಮನ್ಮಧ್ವಾಚಾರ್ಯ ಮೂಲಮಹಾಸಂಸ್ಥಾನ,
ಶ್ರೀರಾಘವೇಂದ್ರಸ್ವಾಮಿಗಳ ಮಠ, ಮಂತ್ರಾಲಯ - 518 345 (A.P.)

ಅನುವಾದ : ವಿ॥ ಬೆಮ್ಮತ್ತಿ ವೇಂಕಟೇಶಾಚಾರ್ಯ

ಪ್ರಥಮಮುದ್ರಣ : 2014

ಪುಟಗಳು : 732

ಬೆಲೆ : 600 ರೂ

ಪ್ರತಿಗಳು : 1000





ಅಕ್ಷರಜೋಡಣೆ :

ಎಸ್. ನಾಗಲತ

ಮುಖಪುಟ :

ಕೆ. ಗಿರಿ.

ಮುದ್ರಣ :
ಪವನ್‌ಪ್ರಿಂಟರ್ಸ್,
ಚಾಮರಾಜಪೇಟೆ, ಬೆಂಗಳೂರು.

# ಭಾವದೀಪ

ನಾಕು ವೇದಗಳ ಸಾರವೇ ಶ್ರೀವೇದವ್ಯಾಸದೇವರಿಂದ ಅನುಗ್ರಹಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರ.

ಇದರ ನಿಜವಾದ ಅರ್ಥವನ್ನು ತಿಳಿಸುವ ಏಕೈಕ ಭಾಷ್ಯವೇ ಜಗದ್ಗುರು ಶ್ರೀಮಧ್ವಾಚಾರ್ಯರಿಂದ ಅನುಗ್ರಹಿಸಲ್ಪಟ್ಟ ಬ್ರಹ್ಮಸೂತ್ರಭಾಷ್ಯ.

ಇದರ ಅರ್ಥವನ್ನು ಪರಿಪೂರ್ಣವಾಗಿ ಸರಳವಾಗಿ ವ್ಯಾಖ್ಯಾನ ಮಾಡಿದ ಟೀಕೆಯೇ ಶ್ರೀಮತ್‌ಟೀಕಾಕೃತ್ಪಾದರೆಂದು ಪ್ರಸಿದ್ಧರಾದ ಶ್ರೀ ಜಯತೀರ್ಥರ ತತ್ವಪ್ರಕಾಶಿಕಾ.

ಇದರ ವಿವರಣೆ - ತುಲನೆ - ವಿಶ್ಲೇಷಣೆ - ತಾತ್ಪರ್ಯಗನ್ನೊಳಗೊಂಡ ಟಿಪ್ಪಣಿಯೇ ಮಂತ್ರಾಲಯದಲ್ಲಿ ವಿರಾಜಮಾನರಾದ ಶ್ರೀಮತ್-ರಾಘವೇಂದ್ರಗುರುಸಾರ್ವಭೌಮರ ಭಾವದೀಪ.

'ಕಬ್ಬಿಣದ ಕಡಲೆ' ಎಂದೇ ಪ್ರಸಿದ್ಧಿ ಪಡೆದ ಭಾವದೀಪ ಗ್ರಂಥದ ಸರಳ ಕನ್ನಡಾನುವಾದ ಕೃತಿಯಿದು. ಅನುವಾದ, ವಿಶೇಷವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ ಕಸ್ತೂರಿ ಕನ್ನಡದಲ್ಲಿ ನೀವೀಗ ಭಾವದೀಪವನ್ನು ಅಧ್ಯಯನ ಮಾಡಿ ರಾಯರ ಕೃಪೆಗೆ ಪಾತ್ರರಾಗಬಹುದು

॥ ಶ್ರೀಮನ್ಮೂಲರಾಮೋ ವಿಜಯತೇ ॥ ॥ ಶ್ರೀಗುರುರಾಜೋ ವಿಜಯತೇ ॥

ಶ್ರೀಮತ್-ಪರಮಹಂಸ-ಪರಿವ್ರಾಜಕಾಚಾರ್ಯ-ಪದ-ವಾಕ್ಯ-ಪ್ರವೀಣ-ಪಾರವಾರ-ಪಾರಂಗತ-
ಸರ್ವತಂತ್ರ-ಸ್ವತಂತ್ರ-ಶ್ರೀಮನ್-ಮೂಲರಘುಪತಿ-ವೇದವ್ಯಾಸ-ದೇವ-ದಿವ್ಯ-ಶ್ರೀಪಾದ
ಪದ್ಮಾರಾಧಕ-ಜಗದ್ಗುರು-ಶ್ರೀಮನ್-ಮಧ್ವಾಚಾರ್ಯ-ಮೂಲಮಹಾಸಂಸ್ಥಾನ-
ಮಂತ್ರಾಲಯ-ಶ್ರೀರಾಘವೇಂದ್ರಸ್ವಾಮಿಗಳವರ ಮಠದ ವೇದಾಂತ-ಸಾಮ್ರಾಜ್ಯ-
ದಿಗ್ವಿಜಯ-ವಿದ್ಯಾಸಿಂಹಾಸನಾಧೀಶ್ವರರಾದ
ಪರಮಪೂಜ್ಯ ಶ್ರೀ ಸುಶಮೀಂದ್ರತೀರ್ಥ ಶ್ರೀಪಾದಂಗಳವರ ಕರಕಮಲಸಂಜಾತರಾದ
ಪರಮಪೂಜ್ಯ ಶ್ರೀ ಸುಯತೀಂದ್ರತೀರ್ಥ ಶ್ರೀಪಾದಂಗಳವರ ವರಕುಮಾರರಾದ
ಪರಮಪೂಜ್ಯ ಶ್ರೀ ಸುಬುಧೇಂದ್ರತೀರ್ಥ ಶ್ರೀಪಾದಂಗಳವರ

# ಅನುಗ್ರಹ ಸಂದೇಶ

ಬ್ರಹ್ಮಸೂತ್ರಕ್ಕೆ-ತಂತ್ರದೀಪಿಕಾ, ಅಧಿಕರಣಗಳಿಗೆ-ನ್ಯಾಯಮುಕ್ತಾವಳಿ, ತತ್ವಪ್ರಕಾಶಿಕಕ್ಕೆ- ಭಾವದೀಪ, ತಾತ್ಪರ್ಯಚಂದ್ರಿಕಾಕ್ಕೆ-ಪ್ರಕಾಶ, ಅಣುಭಾಷ್ಯಕ್ಕೆ-ತತ್ವಮಂಜರೀ. ಹೀಗೆ ರಾಯರು ಬ್ರಹ್ಮಸೂತ್ರಕ್ಕೆ ಸಂಬಂಧಪಟ್ಟಂತೆ ಪ್ರತಿಯೊಂದು ಹಂತದಲ್ಲಿಯೂ ಟಿಪ್ಪಣಿ ಬರೆದಿದ್ದಾರೆ.

ಇವುಗಳಲ್ಲಿ ಭಾವದೀಪಕೃತಿಯ ವೈಶಿಷ್ಟ್ಯ ಅನುಪಮ. ಇದಕ್ಕೆ ಸರಿಸಮಾನವಾದ ಇನ್ನೊಂದು ಕೃತಿ ದುರ್ಲಭ. ಸಂಸ್ಕೃತ ವಾಙ್ಮಯದ ತತ್ವಶಾಸ್ತ್ರೀಯ ಗ್ರಂಥಪ್ರಪಂಚದಲ್ಲಿ ಈ ಕೃತಿ ಬಲು ವ್ಯಾಪಕ. ಇದರಲ್ಲಿರುವ ವಿದ್ವತ್ತು ಮುಗಿಲು ಮುಟ್ಟಿದೆ. ವಿದ್ವಾಂಸರಿಗೂ ಅರ್ಥವಾಗದ ಜಟಿಲ ವಾಕ್ಯಗಳಿದ್ದರೂ ಬಾಲಕರಿಗೂ ಅರ್ಥವಾಗುವ ಸುಲಭಶೈಲಿಯಲ್ಲಿ ಹೆಣೆದಿರುವ ಅಭೂತಪೂರ್ವ ಕೃತಿಯಿದು. ಸೂತ್ರಗಳ ಹಾರ್ದವನ್ನು ಸ್ಪಷ್ಟಪಡಿಸುವ ಇದರ ವಾಕ್ಯಾರ್ಥ ಕುಶಲತೆಯನ್ನು ಓದಿಯೇ ಅನುಭವಿಸಬೇಕು. ಇದು ಸೂತ್ರ ಪ್ರಸ್ಥಾನದ ಕೃತಿಗಳ ಮಧ್ಯ ಅಧ್ಯಯನಕ್ಕೆ ಹೆಸರಾದಂತಹ ಕೃತಿ. ಪಾಂಡಿತ್ಯ, ಸೂಕ್ಷ್ಮ-ವಿಶ್ಲೇಷಣೆ, ನಿಷ್ಠಿತ-ವಿಮರ್ಶೆ, ಪ್ರೌಢಪ್ರತಿಪಾದನಾ-ಶೈಲಿ, ಟೀಕಾಕೃತ್ಪಾದರ ಅಂತಃಪ್ರಜ್ಞೆಯನ್ನು ಬೆಳಗಿಸುವ ಅತ್ಯುತ್ತಮ ಕೃತಿಯಿದು.

ಶ್ರೀಮತ್-ಟೀಕಾಕೃತ್ಪಾದರ 'ತತ್ವಪ್ರಕಾಶಿಕಾ' ಎಂಬ ಟೀಕೆಯ ಮರ್ಮವನ್ನು ತಿಳಿಸುವುದರಲ್ಲಿ ವಿಮರ್ಶಾತ್ಮಕ-ಅಧಿಕೃತವಾದ ಟಿಪ್ಪಣಿಯೇ 'ಭಾವದೀಪ'. ಶ್ರೀಮದಾಚಾರ್ಯರ ಭಾಷ್ಯದ ಅಭಿಪ್ರಾಯವನ್ನು ಅಂತಿಮವಾಗಿ ಅರ್ಥ ಮಾಡಿಕೊಳ್ಳಲು ಭಾವದೀಪ-ಟಿಪ್ಪಣಿಯನ್ನು ಅಧ್ಯಯನ ಮಾಡಲೇ ಬೇಕು. ನ್ಯಾಯಸುಧಾಗ್ರಂಥಕ್ಕೆ ಪರಿಮಳ ಟಿಪ್ಪಣಿಯು ಎಷ್ಟು ಆವಶ್ಯಕವೋ, ತತ್ವಪ್ರಕಾಶಿಕಾ ಗ್ರಂಥಕ್ಕೆ ಭಾವದೀಪ-ಗ್ರಂಥವು ಅಷ್ಟೇ ಆವಶ್ಯಕ.

ಗೊಂಡಾರಣ್ಯದಲ್ಲಿ ಸಿಲುಕಿಕೊಂಡು ದಿಙ್ಮೂಢರಂತೆ ಶಾಸ್ತ್ರಗ್ರಂಥಗಳ ಗೊಡವೆಯೇ ಬೇಡ ಎಂಬ ನಿರಾಶಿತ ಭಕ್ತರಿಗೆ ಉತ್ಸಾಹ ಚಿಲುಮೆಯನ್ನು ಉಕ್ಕಿಸುವ ಏಕೈಕ ಧೀರರೆಂದರೆ ಶ್ರೀ ರಾಘವೇಂದ್ರಸ್ವಾಮಿಗಳು

ಮಾತ್ರ. ಇವರ ಟಿಪ್ಪಣಿಗಳೆಲ್ಲವೂ ದಿಜ್ಞಾಢ್ಯರಿಗೆ ದಾರಿದೀಪಗಳು. ಅದರಲ್ಲಿಯೂ ಭಾವದೀಪ ಗ್ರಂಥ. ಹಗಲಿನ ಸೂರ್ಯನಂತೆ ಕತ್ತಲೆಯನ್ನು ಪರಿಹರಿಸುವ ಉಜ್ವಲ ಪ್ರದೀಪ.

ತತ್ವಪ್ರಕಾಶಿಕಾ ಗ್ರಂಥಕ್ಕೆ ಮೊಟ್ಟಮೊದಲು ಟಿಪ್ಪಣಿಯನ್ನು ಬರೆದವರು ಶ್ರೀವ್ಯಾಸರಾಜರು. ಆದರೆ ಇವರ ತಾತ್ಪರ್ಯ ಚಂದ್ರಿಕಾ ಎಂಬ ಟಿಪ್ಪಣಿಯು ಉಪನ್ಯಾಸದ ಶೈಲಿಯಲ್ಲಿದ್ದು, ಟೀಕೆಯ ಪ್ರತಿಯೊಂದು ವಾಕ್ಯಗಳನ್ನು ಉದ್ಧಾರ ಮಾಡಿ, ವಿವರಣೆ ನೀಡುವುದಿಲ್ಲ. ಅದಕ್ಕೋಸ್ಕರ ಮಂದಮತಿಗಳಿಗೂ ಅರ್ಥವಾಗುವಂತೆ ಯೋಗ್ಯವಾದ ಶೈಲಿಯಲ್ಲಿ ಮೂಲಗ್ರಂಥದ ಪ್ರತಿಯೊಂದು ವಾಕ್ಯಗಳನ್ನು ಎತ್ತಿ ಹಿಡಿದು ವಿವರಣೆ ಮಾಡುವುದಕ್ಕಾಗಿ ಶ್ರೀ ರಾಘವೇಂದ್ರಸ್ವಾಮಿಗಳು ಭಾವದೀಪ ಎಂಬ ಅಪೂರ್ವ ಟಿಪ್ಪಣಿಯನ್ನು ಬರೆದಿರುವರು. ಈ ಕೃತಿಯಲ್ಲಿ ಶ್ರೀ ವ್ಯಾಸರಾಜರ ತಾತ್ಪರ್ಯಚಂದ್ರಿಕಾ ಗ್ರಂಥದ ಮೇಲೆ ಅಪ್ಪಯ್ಯದೀಕ್ಷಿತರೇ ಮೊದಲಾದ ಅನ್ಯಮತೀಯರು ಮಾಡಿದ ಆಕ್ಷೇಪವನ್ನು ಪರಿಹರಿಸಲಾಗಿದೆ. ಅನ್ಯಮತೀಯರ ಆಕ್ಷೇಪವೆಂಬ ಹುಳಗಳನ್ನು ಭಸ್ಮ ಮಾಡುವುದರಿಂದ ಇದಕ್ಕೆ ಭಾವದೀಪ ಎಂಬ ಹೆಸರು ಸಾರ್ಥಕವಾಗಿದೆ. ಟೀಕೆಯ ಅಭಿಪ್ರಾಯವನ್ನು ದೀಪದಂತೆ ಸ್ಪಷ್ಟಪಡಿಸುವುದರಿಂದಲೂ ಭಾವದೀಪ ಎಂಬ ಹೆಸರು ಅನ್ವರ್ಥಕವಾಗಿದೆ.

ಇಂಥ ಅಪೂರ್ವವಾದ ಭಾವದೀಪ ಗ್ರಂಥದ ಅಧ್ಯಯನ ಬಹಳ ವಿರಳವಾಗುತ್ತಿದೆ. ಬುಭುತ್ಸುವರ್ಗದಲ್ಲಿ ಭಾವದೀಪ ಗ್ರಂಥವನ್ನು ಅಧ್ಯಯನ ಮಾಡುವ ಹಂಬಲವುಳ್ಳ ಸಾಧಕರು ಅನೇಕರಿದ್ದಾರೆ. ಆದರೆ ಅಧ್ಯಯನಕ್ಕೆ ಅನುಕೂಲವಾಗುವಂತೆ ಶುದ್ಧವಾದ ಪುಸ್ತಕಗಳು ಬಹಳ ವಿರಳ. ನಮ್ಮ ಮಠದ ಆಸ್ಥಾನ ವಿದ್ವಾಂಸರಾಗಿದ್ದ ವಿದ್ಯಾರತ್ನಂ. ರಾ. ಸ್ವಾ. ಪಂಚಮುಖೀ ಅವರು ಸಂಶೋಧನೆ ಮಾಡಿ, ವಿಶಿಷ್ಟ ವಿಷಯಗಳಿಂದ ಕೂಡಿದ ಭಾಷ್ಯ, ತತ್ವಪ್ರಕಾಶಿಕಾ, ಭಾವದೀಪದ ಪ್ರಕಾಶನವು ಬಹಳ ಉಪಕಾರಕವಾಗಿದೆ. ಆದರೆ ಕನ್ನಡ ಅನುವಾದದ ಪುಸ್ತಕದ ಅವಶ್ಯಕತೆ ಬಹಳವಾಗಿತ್ತು. ಜಿಜ್ಞಾಸುಗಳ ಅಪೇಕ್ಷೆಯಂತೆ ಈ ಭಾವದೀಪ ಕೃತಿಯ ಸಂಸ್ಕೃತ-ಮೂಲ ಹಾಗೂ ಕನ್ನಡಾನುವಾದದ ಪುಸ್ತಕ ಮುದ್ರಣವನ್ನು ನಮ್ಮ ಸಂಸ್ಥಾನದಿಂದ ಮಾಡುತ್ತಿದ್ದೇವೆ. ಇದರ ಸದುಪಯೋಗವನ್ನು ಎಲ್ಲಾ ಜಿಜ್ಞಾಸುಗಳು ಪಡೆದುಕೊಳ್ಳುವುದರಲ್ಲಿ ಸಂಶಯವಿಲ್ಲ.

ಭಾವದೀಪದಲ್ಲಿ ಒಂದು ವಿಷಯವನ್ನು ಹೇಳಿದ ಮೇಲೆ ಪುನಃ ಅದನ್ನು ಹೇಳುವುದಿಲ್ಲ. ಆದ್ದರಿಂದಲೇ 'ಉಕ್ತಂ ನೋ ವಕ್ತಿ ಭೂಯಃ' ಎಂಬುದಾಗಿ ಗುರುಗುಣಸ್ತವನದಲ್ಲಿ ರಾಯರನ್ನು ಪ್ರಶಂಸಿಸುತ್ತಾರೆ. ಆದರೂ ಕೂಡ ಯಾವುದೇ ಸಂದೇಹದ ಲೇಶವನ್ನು ಪರಿಹಾರ ಮಾಡದೇ ಬಿಡುವುದಿಲ್ಲ. 'ಅಸಂಶಯಃ ಸಂಶಯಚ್ಛಿತ್ ಗುರುರುಕ್ತೋ ಮನೀಷಿಭಿಃ' ತನಗೆ ಸಂಶಯವಿಲ್ಲದೇ ಮತ್ತೊಬ್ಬರ ಸಂಶಯವನ್ನು ಪರಿಹರಿಸುವ ನಿಜವಾದ ಗುರುಗಳು ಎಂಬ ಹೆಗ್ಗಳಿಕೆಗೆ ಭಾವದೀಪಕಾರರು ಪಾತ್ರರಾಗಿದ್ದಾರೆ.

ಈಕ್ಷತ್ಯಧಿಕರಣದ ಕೊನೆಯಲ್ಲಿ ರಾಯರು ನುಡಿದ ಮಾತು ಬಲು ರೋಮಾಂಚನಕಾರಿ -

ದೇವೋತ್ತಮೈರ್ಲಾಲನೀಯೋ ಭಾಷ್ಯಕಾರನಿರೂಪಿತಃ ।
ಸೂತ್ರಾರ್ಥೋಽನೇಕಮಾನೇತಃ ಸರ್ವೈರ್ಗ್ರಾಹ್ಯೋ ಬುಭೂಷುಭಿಃ ॥

''ಎಲ್ಲಾ ಸಂಶಯಗಳಿಗೂ ಉತ್ತರ ನೀಡುವ ಶ್ರೀಮದಾಚಾರ್ಯರ ಸೂತ್ರಾರ್ಥವೇ ಸರ್ವಪ್ರಮಾಣಸಮ್ಮತವಾಗಿದೆ. ಎಲ್ಲಾ ಮುಮುಕ್ಷುಗಳಿಗೂ ಗ್ರಾಹ್ಯವಾಗಿದೆ. ದೇವೋತ್ತಮರಿಗೂ ಅತ್ಯಂತ ಪ್ರಿಯವಾಗಿದೆ'' ಎಂದು ಘಂಟಾಘೋಷವಾಗಿ ಸಾರಿದ್ದಾರೆ.

ರಾಘವೇಂದ್ರವಿಜಯದಲ್ಲಿ ರಾಯರ ಬಗ್ಗೆ ಹೀಗೆ ಹೇಳಿದ್ದಾರೆ - 'ವೇತ್ತಿ ವರ್ಣನಿಚಯಂ ಸಮಯಾನಾಂ ಸಂಖ್ಯಯಾ ಸಹಧಿಯೈವ ಸಹಾರ್ಥ್ಯೆಃ' - ಶ್ರೀ ರಾಘವೇಂದ್ರತೀರ್ಥರಿಗೆ ಎಲ್ಲಾ ಶಾಸ್ತ್ರಗಳಲ್ಲಿರುವ ಅಕ್ಷರಗಳೆಷ್ಟು ಅವುಗಳ ಅರ್ಥಗಳೆಷ್ಟು ಎಂಬುದು ತಿಳಿದಿದೆ. ವಾಯುದೇವರ ಆವೇಶವಿರುವ ಪ್ರಯುಕ್ತ ಈ ಮಾತು ಅತಿಶಯೋಕ್ತಿಯಾಗುವುದಿಲ್ಲ. ಇಂತಹ ವಿದ್ವನ್ಮಣಿಗಳಾಗಿದ್ದರೂ ರಾಯರು ಜಿಜ್ಞಾಸಾಧಿಕರಣದ ಕೊನೆಯಲ್ಲಿ ವಿನಯದಿಂದ ಹೀಗೆ ಹೇಳಿದ್ದಾರೆ -

ಟೀಕಾತಾತ್ಪರ್ಯವಿವೃತೌ ವ್ಯಾಸತೀರ್ಥಾದಯಃ ಕ್ಷಮಾಃ ।
ವಯಂ ತು ತತ್ಕೃತವ್ಯಾಖ್ಯಾಲೇಶಭಾಜೋ ವಂದಾಮಹೇ ॥

ಟೀಕೆಯ ನಿಗೂಢವಾದ ಅಭಿಪ್ರಾಯಗಳನ್ನು ತೆರೆದು ತೋರಿಸುವಲ್ಲಿ ಶ್ರೀವ್ಯಾಸತೀರ್ಥರೇ ಸಮರ್ಥರು. ಅವರು ಹೇಳಿದ್ದನ್ನೇ ನಾವು ಲೇಶಮಾತ್ರ ತಿಳಿದುಕೊಂಡು ಹೇಳುತ್ತಿದ್ದೇವೆ. ಮಹಾನುಭಾವರಾದ ಜಯತೀರ್ಥರೇ 'ನ ಶಬ್ದಾಬ್ಧೌ ಗಾಧಾಃ' ಎಂದು ಯಾವ ಶಾಸ್ತ್ರದಲ್ಲಿಯೂ ತನಗೆ ಪರಿಣತಿ ಇಲ್ಲ ಎಂದಿದ್ದಾರೆ. ಅಂದ ಮೇಲೆ ಅವರ ಶಿಷ್ಯರಾದ ಶ್ರೀ ರಾಘವೇಂದ್ರತೀರ್ಥರು ಅಂತಹ ಮಾತು ಹೇಳಿದರೆ ಅದು ಭೂಷಣವೇ ಆಗಿದೆ. ರಾಯರ ವಿದ್ವತ್ತಿನ ಪರಾಕಾಷ್ಠೆಯೂ ನಮಗೆ ಅರ್ಥವಾಗುವುದಿಲ್ಲ; ವಿನಯದ ಪರಾಕಾಷ್ಠೆಯೂ ಅರ್ಥವಾಗುವುದಿಲ್ಲ.

ವಿಶೇಷ ವಿಚಾರ ಹಾಗೂ ಸಮಗ್ರ ವಿಶ್ಲೇಷಣೆಯೊಂದಿಗೆ ಭಾವದೀಪ ಗ್ರಂಥ ಕನ್ನಡಾನುವಾದದ ಬೃಹತ್ ಯೋಜನೆಯ ಜವಾಬ್ದಾರಿಯನ್ನು ವಿ॥ ಬೆಮ್ಮತ್ತಿ ವೆಂಕಟೇಶಾಚಾರ್ಯರಿಗೆ ನಾವು ವಹಿಸಿರುತ್ತೇವೆ. ಹತ್ತಾರು ವರ್ಷಗಳಿಂದ ಸೂತ್ರಪ್ರಸ್ಥಾನದ ಅಧ್ಯಯನದಲ್ಲಿಯೇ ತೊಡಗಿಕೊಂಡಿರುವ ಇವರು ಸುಧಾಸೌರಭ ಗ್ರಂಥದ ಸಂಪಾದಕರಾಗಿ ಹಾಗೂ ಪರಿಪೂರ್ಣಚಂದ್ರಿಕಾ ಗ್ರಂಥದ ನಿರ್ಮಾತೃಗಳಾಗಿ ಈಗಾಗಲೇ ಜಿಜ್ಞಾಸುಗಳಿಗೆ ಪರಿಚಿತರಾಗಿದ್ದಾರೆ. ವಿಜಯನಾಮ ಸಂವತ್ಸರದ ಫಾಲ್ಗುಣ ಮಾಸದಲ್ಲಿ ನಡೆದ ಶ್ರೀಮದ್-ರಾಘವೇಂದ್ರ-ಗುರುಸಾರ್ವಭೌಮರ ವರ್ಧಂತಿಯ ಸುಮುಹೂರ್ತದಲ್ಲಿ ಈ ಬೃಹತ್ ಯೋಜನೆಯನ್ನು ಹಮ್ಮಿಕೊಳ್ಳುವಂತೆ ಅವರಿಗೆ ರಾಯರ ಅನುಗ್ರಹಿಸಿದ್ದಾರೆ. ಸುಮಾರು ಎಂಟು ಬೃಹತ್ ಸಂಪುಟಗಳಿಂದ ಹೊರಬರುವ ಈ ಪುಸ್ತಕಗಳನ್ನು ನಿರ್ವಿಘ್ನವಾಗಿ ಬರೆಯಲು ಇವರಿಗೆ ಅಸ್ಮದ್ಗುರ್ವಂತರ್ಗತ ಶ್ರೀಮದ್ರಾಘವೇಂದ್ರತೀರ್ಥಗುರ್ವಂತರ್ಗತ-ಭಾರತೀರಮಣ-ಮುಖ್ಯಪ್ರಾಣಾಂತರ್ಗತ-ಶ್ರೀಮನ್ ಮೂಲರಘುಪತಿ-ವೇದವ್ಯಾಸದೇವರು ಸಂಪೂರ್ಣವಾಗಿ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇವೆ.

ಇತಿ ನಾರಾಯಣ ಸ್ಮರಣೆಗಳು

# ಅನುಕ್ರಮಣಿಕಾ

# ಮುನ್ನುಡಿ

''ಟಿಪ್ಪಣ್ಣಾಚಾರ್ಯಚಕ್ರವರ್ತಿಗಳು' ಎಂದು ಪ್ರಸಿದ್ಧರಾದ ಮಂತ್ರಾಲಯಪ್ರಭುಗಳಾದ ಶ್ರೀರಾಘವೇಂದ್ರಗುರುಸಾರ್ವಭೌಮರು 48ಕ್ಕೂ ಮಿಗಿಲಾದ ಗ್ರಂಥಗಳನ್ನು ರಚಿಸಿ ಸಾರಸ್ವತ ಪ್ರಪಂಚಕ್ಕೆ ವಿಶಿಷ್ಟ ಕೊಡುಗೆಯನ್ನು ಸಲ್ಲಿಸಿರುತ್ತಾರೆ. ಪುಟ್ಟ-ಪುಟ್ಟ ಕೃತಿಗಳಿಂದ ಆರಂಭಿಸಿ ಬೃಹತ್ತಾದ ಗ್ರಂಥಗಳವರೆಗೆ ಬರೆದಿರುವ ಕೀರ್ತಿ ಅವರದ್ದು.

## ಭಾವದೀಪ

ಶ್ರೀವೇದವ್ಯಾಸರು ಬರೆದ ಬ್ರಹ್ಮಸೂತ್ರಗಳಿಗೆ ಶ್ರೀಮದಾಚಾರ್ಯರು ಭಾಷ್ಯವನ್ನು ರಚಿಸಿದರು. ಅದಕ್ಕೆ ಟೀಕಾಕಾರರಾದ ಶ್ರೀಜಯತೀರ್ಥರು ''ತತ್ವಪ್ರಕಾಶಿಕಾ'' ಟೀಕೆಯನ್ನು ಬರೆದಿರುತ್ತಾರೆ. ಅದಕ್ಕೆ ಶ್ರೀರಾಘವೇಂದ್ರತೀರ್ಥರು ಟಿಪ್ಪಣೆಯನ್ನು ರಚಿಸಿರುತ್ತಾರೆ. ಇದರ ಹೆಸರೇ ''ಭಾವದೀಪ'' ಎಂದು. ಹೆಸರೇ ಹೇಳುವಂತೆ ಭಾಷ್ಯ, ಟೀಕೆಗಳ ಭಾವವನ್ನು ವಿವರಿಸುವ ಗ್ರಂಥವು ಇದಾಗಿದೆ.

ಶ್ರೀವ್ಯಾಸರಾಜರೂ ಕೂಡ ಇದೇ ತತ್ವಪ್ರಕಾಶಿಕೆಗೆ ''ಚಂದ್ರಿಕಾ'' ಎಂಬ ಒಂದು ಅದ್ಭುತವಾದ ವ್ಯಾಖ್ಯಾನವನ್ನು ರಚಿಸಿರುತ್ತಾರೆ. ಅವರು ಪರಮತ ನಿರಾಕರಣೆಯಲ್ಲಿ ತಮ್ಮ ವ್ಯಾಖ್ಯಾನವನ್ನು ಬಳಸಿಕೊಂಡು ತರ್ಕ, ವ್ಯಾಕರಣ, ಮೀಮಾಂಸಾದಿ ವಿಚಾರಗಳ ಧಾರೆಯಿಂದ ಅಲ್ಲಿ ಪ್ರಾಪ್ತವಾದ ಪೂರ್ವಪಕ್ಷಗಳ ಖಂಡನೆಯನ್ನು ಮಾಡುತ್ತಾರೆ. ಹಾಗಾಗಿ ತತ್ವಪ್ರಕಾಶಿಕೆಯ ಎಲ್ಲಾ ವಾಕ್ಯಗಳಿಗೆ ವ್ಯಾಖ್ಯಾನ ಮಾಡುವ ವಿಚಾರಕ್ಕೆ ಹೋಗಿಲ್ಲ. ಆದರೆ ಆ ಒಂದು ಕಾರ್ಯವನ್ನು ತಮ್ಮ ಮುಂದಿನ ಅವತಾರವಾದ ಶ್ರೀರಾಘವೇಂದ್ರತೀರ್ಥರಾದಾಗ ಮಾಡಿರುತ್ತಾರೆ. ''ಭಾವದೀಪ''ದಲ್ಲಿ ತತ್ವಪ್ರಕಾಶಿಕೆಯ ಎಲ್ಲಾ ವಾಕ್ಯಗಳಿಗೂ ವ್ಯಾಖ್ಯಾನವನ್ನು ಮಾಡಿರುತ್ತಾರೆ.

ಶ್ರೀಚಂದ್ರಿಕಾಚಾರ್ಯರು ತತ್ಕಾಲದಲ್ಲಿ ಬಂದ ಎಲ್ಲಾ ಆಕ್ಷೇಪಗಳಿಗೆ ಉತ್ತರವನ್ನು ನೀಡಿ ಸಿದ್ಧಾಂತ ಸ್ಥಾಪನೆಯನ್ನು ಮಾಡಿರುತ್ತಾರೆ. ಆದರೆ ಅವರ ನಂತರ ಬಂದ ಅಪ್ಪಯ್ಯದೀಕ್ಷಿತರೇ ಮೊದಲಾದ ಅರ್ವಾಚೀನರ ಆಕ್ಷೇಪಗಳಿಗೆಲ್ಲಾ ಶ್ರೀರಾಯರು ತಮ್ಮ ಭಾವದೀಪದಲ್ಲಿ ಉತ್ತರಿಸಿರುತ್ತಾರೆ. ಅದಕ್ಕೇನೇ ತಮ್ಮ ಗ್ರಂಥಾರಂಭದಲ್ಲಿ

ನೂತನೈರುದಿತಾ ಯೇ ತು ದೋಷಾಸ್ತೇಷಾಮಲಗ್ನತಾಮ್ ।
ಸಂಪ್ರದರ್ಶಯಿತುಂ ಚಾऽತಃ ಪ್ರಸನ್ನಾಃ ಸಂತು ಸಜ್ಜನಾಃ ॥

ಎಂಬ ಶ್ಲೋಕದಿಂದ ನೂತನರು ಮಾಡಿದ ಆಕ್ಷೇಪಗಳ್ಯಾವೂ ನಮ್ಮ ಟೀಕಾಕೃತ್ಪಾದರ ಗ್ರಂಥಕ್ಕೆ ಕೂಡುವುದಿಲ್ಲ ಎಂಬುದನ್ನು ತೋರಿಸಲು ಈ ನಮ್ಮ ಕೃತಿಯಾಗಿದೆ ಎಂದು ಶ್ರೀಗುರುರಾಜರು ಅಭಿಪ್ರಾಯಪಡುತ್ತಾರೆ.

ಅಷ್ಟೇ ಅಲ್ಲ, ಶ್ರೀವ್ಯಾಸರಾಜರ ಚಂದ್ರಿಕೆಯ ಆರಂಭದ ಎರಡು ಅಧ್ಯಾಯಗಳಿಗೆ ಮಾತ್ರ ಬರೆಯಲ್ಪಟ್ಟಿದೆ. ಮುಂದಿನ ಎರಡು ಅಧ್ಯಾಯಗಳಿಗೆ ಶ್ರೀರಾಯರ ಭಾವದೀಪವೇ ಆ ಕಾರ್ಯವನ್ನು ಮಾಡುತ್ತದೆ. ಭಾವದೀಪದ ಮೂರು, ನಾಲ್ಕನೇ ಅಧ್ಯಾಯಗಳ ಪರ್ಯಾಲೋಚನೆ ಮಾಡಿದವರಿಗೆ ಮೊದಲನೆ ಎರಡು ಅಧ್ಯಾಯಕ್ಕೂ ಮತ್ತು ನಂತರದ ಎರಡು ಅಧ್ಯಾಯಗಳಿಗೆ ಇರುವ ವ್ಯತ್ಯಾಸವು ತಿಳಿಯುತ್ತದೆ. ಅಲ್ಲಿ ವಿಶೇಷ ವ್ಯಾಖ್ಯಾನ ಕ್ರಮವನ್ನು ಮಾಡಿರುತ್ತಾರೆ.

ಈ ತತ್ತ್ವಪ್ರಕಾಶಿಕಾ ಭಾವದೀಪದ ಬಗ್ಗೆ ಬರೆಯುತ್ತಾ ಗುರುಗುಣಸ್ತವನಕಾರರಾದ ಶ್ರೀವಾದೀಂದ್ರತೀರ್ಥರು -

ಪ್ರಾಯಃ ಪ್ರಾಗನ್ಯದೀಯತನುತರವಿವೃತಿಗ್ರಂಥವಾಸೋವಿಹೀನಾ
ಹ್ರೀಣಾ ನಾದರ್ಶಿ ಧೀರೈರಪಿ ಕಿಲ ಯುವತಿರ್ಭಾಷ್ಯಟೀಕಾಭಿಧಾನಾ ।
ಅದ್ಯ ಶ್ರೀರಾಘವೇಂದ್ರವ್ರತಿಕೃತ ವಿವೃತಿ ಪ್ರೌಢಕೌಶೇಯ ರತ್ನಂ
ಸ್ವಾಭಿಪ್ರೇತಂ ವಸಾನಾ ವಿಹರತಿ ಸುಧಿಯಾಮಗ್ರತಃ ಸ್ವೈರಿಣೀವ ॥

ಅಂದರೆ ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀಜಯತೀರ್ಥರು ಬರೆದ ತತ್ವಪ್ರಕಾಶಿಕಾ ಎಂಬ ಯುವತಿಯು ಬೇರೆಯವರು ಬರೆದ ವ್ಯಾಖ್ಯಾನಗಳೆಂಬ ವಸ್ತ್ರಗಳಿದ್ದರೂ ಅವುಗಳಿಂದ ತನ್ನ ಶರೀರವು ಪೂರ್ತಿಯಾಗಿ ಮುಚ್ಚುವುದಿಲ್ಲವೆಂದು, ಯಾವ ವಿದ್ವಾಂಸರ ಕಣ್ಣಿಗೆ ಕಾಣದೇ ಅಡಗಿ ಕುಳಿತಿದ್ದಳು. ಯಾವಾಗ ಶ್ರೀರಾಘವೇಂದ್ರತೀರ್ಥಗುರುಸಾರ್ವಭೌಮರು 'ತತ್ವಪ್ರಕಾಶಿಕಾ' ಎಂಬ ಯುವತಿಗೆ "ಭಾವದೀಪ" ಎಂಬ ವ್ಯಾಖ್ಯಾನರೂಪವಾದ ಶ್ರೇಷ್ಠ ಪೀತಾಂಬರವನ್ನು ಉಡಿಸಿದರೋ ಆಗ, ಸ್ವಚ್ಛಂದ ಸ್ತ್ರೀಯಂತೆ ವಿದ್ವಾಂಸರ ಮುಂದೆ ಓಡ್ಯಾಡಿದಳು ಎಂದು ವರ್ಣಿಸಿದ್ದಾರೆ. ಇದರಿಂದ ಶ್ರೀಗುರುರಾಜರ ಈ ವ್ಯಾಖ್ಯಾನವು ತತ್ವಪ್ರಕಾಶಿಕಾಕ್ಕೆ ಒಳ್ಳೇ ಪೀತಾಂಬರ ಉಡಿಸಿದಂತೆ ಇದೆ ಎಂದು ತಿಳಿದುಬರುತ್ತದೆ. ಇಂತಹ ಅಪೂರ್ವವಾದ ಗ್ರಂಥವನ್ನು ಇದಂಪ್ರಥಮತಯಾ ಕನ್ನಡಾನುವಾದವನ್ನು ಮಾಡಿಸಿ ಶ್ರೀಮಠದಿಂದ ಮುದ್ರಿಸುವ

ಸಂಕಲ್ಪವನ್ನು ಮಾಡಿದ ಪರಮಪೂಜ್ಯ ಶ್ರೀಪಾದಂಗಳವರು ಇದರ ಅನುವಾದ ಕಾರ್ಯವನ್ನು ನಮ್ಮ ನೇತೃತ್ವದಲ್ಲಿ ಬೆಂಗಳೂರಿನ ವಿದ್ವಾಂಸರಾದ ಶ್ರೀಮಠದ ಶಿಷ್ಯರಾದ ವಿದ್ವಾನ್ ಬೆಮ್ಮತ್ತಿ ವೇಂಕಟೇಶಾಚಾರ್ಯರಿಗೆ ವಹಿಸಿದ್ದರು. ಅವರು ಬಹಳ ವಿಶೇಷವಾಗಿ ಪ್ರತಿಯೊಂದು ಭಾಗವನ್ನು ಬಿಡದಲೇ ಅನುವಾದಿಸಿ ಸಮಯಕ್ಕೆ ಮುದ್ರಣವಾಗುವಂತೆ ಒದಗಿಸಿದ್ದಾರೆ. ಈ ಸಂದರ್ಭದಲ್ಲಿ ಅವರನ್ನು ಅಭಿನಂದಿಸುತ್ತಿದ್ದೇವೆ. ಶ್ರೀಗುರುರಾಜರ ಈ ಕೃತಿಯನ್ನು ಪ್ರತಿಯೊಬ್ಬರೂ ಪಡೆದು ಅಧ್ಯಯನವನ್ನು ಮಾಡಿ ಅವರ ಪೂರ್ಣಾನುಗ್ರಹಕ್ಕೆ ಪಾತ್ರರಾಗಲೆಂದು ನಮ್ಮ ಕುಲಸ್ವಾಮಿಯಲ್ಲಿ ಪ್ರಾರ್ಥಿಸುತ್ತೇವೆ.

ಪಂಡಿತಕೇಸರಿ
ಮಹಾಮಹೋಪಾಧ್ಯಾಯ
**ರಾಜಾ ಎಸ್. ಗಿರಿ ಆಚಾರ್ಯರು**
ಶ್ರೀರಾಘವೇಂದ್ರಸ್ವಾಮಿಗಳ ಮಠ,
ಮಂತ್ರಾಲಯ.

# BhavaDipa

## ENGLISH INTRODUCTION

We express our Gratitude with Danda Pranaamas, to HH Sri Sri Subudhendra Tirtha, Pontiff, Sri Raghavendra Swamy Mutt, for His Anugraha Vachana for this Volume of Vidwan Bemmatti Venkateshacharya, concerned with translation and explanatory Notes on Tatwaprakashika and Bhavadipa.

"BhavaDipa" is the Gloss (Tippani) composed by Sri Raghavendra Tirtha, on "Tatvaprakashika", which itself is a commentary, by Sri Jayatirtha, called Tatvaprakaashika, on BrahmaSutra Bhashya, composed by Sri Madhvacharya, as Bhashya on Sri BrahmaSutras, authored by Sri Vedavyasa with a view to facilitating the correct interpretation of the Vedas. Bhavadipa literally means light on the essence or purport. Thus, Bhavadipa on Tatvaprakaashika means a Gloss throwing light on the essential meanings and special intellectual and philosophical issues dealt with in Tatvaprakaashika, by Sri Jayatirtharu.

Most of the Glosses authored by Sri Raghavendra Tirtha are called by names, such as, Bhavadipa, Prakash and Dipika. The main purpose of Sri Raghavendra Tirtha in writing these glosses is to elaborate on the meanings of the main texts in such a manner that the scholars and even the beginners do not miss the subtle points of the Prameyas. Further, another purpose is to repudiate the negative comments made by the adverseries and thereby to bring to lime light the main messages of the original author. This Bhavadipa onTatvaprakashika, is meant to fulfill all these objectives. Sri Raghavendra Tirtha spells out all these objectives, in the Mangala Slokas of Bhava-Dipa, as follows:

लक्ष्मीनारायणं नत्वा पूर्णबोधान् गुरूनपि ।
तत्वप्रकाशिकाभावदीपं कुर्यां यथामति ।।
यद्यपि तत्वप्रकाशिकाऽऽकूतं चन्द्रिकातः प्रकाशितम् ।
अपि मन्दकृते सर्वविषया च कृतिर्मम ।।
नूतनैरुदिता ये तु दोषास्तेषामलग्नतां ।
सम्प्रदर्शयितुं चाऽतः प्रसन्नाः सन्तु सज्जनाः ।।

Sri Vadindra Tirtha, who is hailed as उभयवंशाब्धिचन्द्रमाः, has written an extremely insightful Stotram, focusing on the contributions of Sri Raghavendra Swamigalu to the ज्ञानभान्डागार through the composition of several treatises of great philosophical importance. While eulogising the greatness of TatvaprakaaSika BhaavaDipa, Sri Vadindra Tirtha writes as follows:

प्रायः प्रागन्यदीयातनुतरविवृतिग्रंथवासोविहीना ।
ह्रीणा नादर्शि धीरैरपि किल युवतिर्भाष्यटीकाभिधाना ।।
अद्य श्रीराघवेन्द्रव्रतिकृतविवृतिप्रौढकौशेयवासः ।
स्वाभिप्रेतं वसाना विहरति सुधियामग्रतः स्वैरिणीव ।।

There is a beautiful allegory that is made here. Tatvaprakaashika is likened to a charming Lady. It is argued that the Bhavadipa of Sri Rayaru is like a rich silk Saree with all embroideries, liked by this Lady. Prior to the availability of this full Saree, the Lady did not have full protection for her body and as such she was shy to appear in front of the scholarly community. But with the Gift of this elaborate Saree (in the form of Bhavadipa), the Tatvaprakaashika Lady could walk freely in front of the scholarly community. The purport is that the earlier commentaries were very brief and as such the scholars could not study Tatvaprakashika to their full satisfaction. The Bhavadipa of Sri Raghavendra Swamigalu, encouraged the scholars and the .beginners to study SutraBhashya and Tatvaprakasika with hitherto greater intensity than before.

This Volume, written by Vidwan Bemmatti Venkateshacharya, with translation and explanatory Notes, is an extremely scholarly treatise. It is based on extensive research and study of the different related Granthas, on Brahmasutras. Vidwan Venkateshacharya, has a very systematic style of presenting the themes of Prameya and Vyakarana. While justifyimg the formation of different words, such as, कृपालुः, श्रद्धालुः, and स्पृहयालुः, Sri Venkateshacharya spares no efforts in explaining the correct use of the different rules of Grammar by quoting approapriate Panini Sutras.

While clearing the various doubts of interpretations, the author adopts the innovative method of presenting the sequence of प्रश्न's and उत्तर's, making it clearer and easier to the readers. The author is competent in using the most modern research methodology in presenting even the complex thoughts in simplified fashion.

My intention is not to present the illustrations of the genius of Sri Raghavendra Swamigalu in giving the various interpretations of the issues presented in Tatvaprakasika. Lot of insight would be available in the scholarly treatise in Kannada, put forward by Vidwan Sri Venkateshacharya in this Volume.

However, I am tempted to raise one minor Issue for Debate. In most of the Texts of the second Mangala Sloka of Tatvaprakaasika, the word याञ्चा is written. Sri Venkateshacharya, also accepts this patha and writes that याच्ना is a पाठान्तर. By the study of बृहद्धातुकुसुमाकर, संस्कृत कोश, अमरकोश, मेघदूतं (कालिदास) (Mallinath Commentary), one feels that the correct words are याच्+ञा= याच्ञा, याचना, याचनम्. The word याच्+ञा=याच्ना will have to be considered as the equivalent of याच्+ञा ।. Even though there is lot of discussion on this topic, in वाक्यार्थमञ्जरी, मल्लिनाथटिप्पणी, it is puzzling to note that the word याञ्चा continues to be in vogue, at various levels.

Vidwan Bemmatti Venkateshacharya deserves all accollades for his painstaking efforts in not only translating the Bhashya, Tatwaprakaasika and Bhavadipa, in Kannada but also for his scholarly presentation of the various themes of Siddhanta and related Shastras.

Sri Gurusarvabhouma Samsodhan Mandira is happy to bring out this first Volume in the series of more Volumes on Bhavadipa and other Granthas of Sri Raghavendra Swamigalu.

Vachaspati Dr. Vadirajacharya. R. Panchamukhi
Executive Director,
Sri Gurusarvabhouma Samsodhan Mandira
Mantralayam
1-9-2014

# ಅಧ್ಯಯನಕ್ಕೊಂದು ಭೂಮಿಕೆ

ಯಾವುದೇ ಸಂಶಯ ಕೂಪದಲ್ಲಿ ಬೀಳದಂತೆ ಎಚ್ಚರ ವಹಿಸುವ ಕೈಬೀಸಿ ಕರೆದು ಸುಸ್ಪಷ್ಟವಾಗಿ ತತ್ವನಿಶ್ಚಯವನ್ನು ನೀಡುವ ಕತ್ತಲೆಯಿಂದ ಅಮೃತತ್ವದೆಡೆಗೆ ಅಕ್ಕರೆಯಿಂದ ಕೈಹಿಡಿದು ಕರೆದೊಯ್ಯುವ ಸತ್ಯಧರ್ಮಗಳ ತವರು.....

ಐಹಿಕ ಸಿರಿಯ ಜೊತೆ ಆಮುಷ್ಮಿಕ ಸಿರಿಯನ್ನು ಅವ್ಯಕ್ತವಾಗಿ ನೀಡುವ ಕಲ್ಪವೃಕ್ಷ.....

ಸೂತ್ರ - ಭಾಷ್ಯ- ಟೀಕಾ - ಟಿಪ್ಪಣಿ - ವಿವರಣೆ - ತುಲನೆ - ವಿಶ್ಲೇಷಣೆ - ಕಠಿಣಪದಾರ್ಥ- ತಾತ್ಪರ್ಯ..... ಬಯಸಿದ್ದೆಲ್ಲವನ್ನು ನೀಡುವ ಕಾಮಧೇನು.....

ಇದುವೇ ಮಂತ್ರಾಲಯ ಪ್ರಭುಗಳ ಪ್ರತಿಬಿಂಬದಂತಿರುವ ಮೇರುಕೃತಿ 'ಭಾವದೀಪ'.

ಇಂಥ ಶ್ರೇಷ್ಠವಾದ ಭಾವದೀಪ ಗ್ರಂಥದ ಅಧ್ಯಯನ ಮಾಡುವ ಅವಕಾಶ ನಮಗೆ ಲಭಿಸಿರುವುದು ಮಹಾಸೌಭಾಗ್ಯ. ಭಾವದೀಪ ಅಧ್ಯಯನಕ್ಕಿಂತ ಮೊದಲು ಸೂತ್ರ, ಸೂತ್ರಭಾಷ್ಯ, ತತ್ವಪ್ರಕಾಶಿಕಾ ಇವುಗಳ ಬಗ್ಗೆ ತಿಳಿಯೋಣ. ಭಾವದೀಪದ ವೈಶಿಷ್ಟವನ್ನೂ ಅರಿತು ಅಧ್ಯಯನದಲ್ಲಿ ತಲ್ಲೀನರಾಗೋಣ.

*ವೇದವ್ಯಾಸದೇವರು ಅವತರಿಸಿ ವೇದವಿಭಾಗ ಮಾಡಿದರು.*

ಕೃತಯುಗದಲ್ಲಿ ವೇದವು ಅಖಂಡವಾಗಿ ಒಂದೇ ಆಗಿತ್ತು. ಋಗ್ವೇದ, ಯಜುರ್ವೇದ, ಸಾಮವೇದ ಎಂಬ ವಿಭಾಗ ಇರಲಿಲ್ಲ. ಇದನ್ನು ಮೂಲವೇದ ಎಂಬುದಾಗಿ ಶಾಸ್ತ್ರದಲ್ಲಿ ಕರೆಯಲಾಗಿದೆ. ನಾರಾಯಣನ ಉಪದೇಶದಿಂದ ಬ್ರಹ್ಮಾದಿಗಳಿಂದ ಪ್ರಕಟಗೊಂಡ ಯಾವ ತತ್ವಜ್ಞಾನವಿದೆಯೋ ಅದು ಸ್ಥಿರವಾಗಿತ್ತು. ಸಂದೇಹದಿಂದ ಮತ್ತು ಭ್ರಮೆಯಿಂದ ಕಲುಷಿತವಾಗಿರಲಿಲ್ಲ.

ತ್ರೇತಾಯುಗದಲ್ಲಿ ಧರ್ಮದ ಒಂದು ಭಾಗ ನಶಿಸಿದ್ದರಿಂದ ತತ್ವಜ್ಞಾನವು ಸ್ವಲ್ಪ ಸಂದೇಹ ಹಾಗೂ ಭ್ರಮೆಗಳಿಂದ ಕಲುಷಿತವಾಯಿತು. ಆ ಸಂದರ್ಭದಲ್ಲಿ ಹಯಗ್ರೀವರೂಪಿಯಾದ ಭಗವಂತನು ಋಕ್, ನಿಗದ, ಸಾಮ ಎಂಬುದಾಗಿ ಮೂಲವೇದದಿಂದ ಮೂರು ವಿಭಾಗವನ್ನು ಮಾಡಿದನು. ಇವುಗಳಿಗೆ ಉಪವೇದ ಎಂದು ಶಾಸ್ತ್ರದಲ್ಲಿ ಕರೆಯಲಾಗಿದೆ. ಅಥರ್ವವೇದ ಎಂಬುದು ಪ್ರತ್ಯೇಕವಾದ ವೇದವಾಗಿರಲಿಲ್ಲ. ಮುಂದೆ ವೈವಸ್ವತ ಮನ್ವಂತರವು ಪ್ರಾಪ್ತವಾದಾಗ ಅಥರ್ವ ಎಂಬ ಋಷಿಯು ಚತುರ್ಮುಖಬ್ರಹ್ಮದೇವರ ಮಗನಾಗಿ ಜನಿಸಿದನು. ನಿಗಧದಲ್ಲಿ ಸೇರಿರುವ ವೇದಭಾಗವನ್ನು ತನ್ನ ದಿವ್ಯಜ್ಞಾನದಿಂದ ಪ್ರತ್ಯಕ್ಷೀಕರಿಸಿಕೊಂಡನು. ಆದ್ದರಿಂದ ಆ ವೇದಭಾಗಕ್ಕೆ ಅಥರ್ವವೇದ ಎಂದು ಪ್ರಸಿದ್ಧಿ ಬಂದಿತು. ಹೀಗೆ ಒಂದು ವೇದ ಮೂರು ಕವಲಾಗಿ ವೈವಸ್ವತ ಮನ್ವಂತರದಲ್ಲಿ ನಾಲ್ಕಾಯಿತು.

ದ್ವಾಪರಯುಗದ ಕೊನೆಯಲ್ಲಿ ಧರ್ಮದ ಎರಡು ಪಾದಗಳು ನಾಶವಾಗಿ ಇನ್ನೆರೆಡು ಪಾದಗಳು ಮಾತ್ರ ಉಳಿದಿದ್ದವು. ಹೀಗೆ ಕಾಲಪ್ರಭಾವದಿಂದ ತತ್ವಜ್ಞಾನವು ಮತ್ತಷ್ಟು ಹಾಳಾಯಿತು. ಜೊತೆಯಲ್ಲಿ ಗೌತಮರ ಶಾಪವೂ ಕೂಡ ಸೇರಿತ್ತು. ಆದ್ದರಿಂದ ಸಕಲ ಸಜ್ಜನರಲ್ಲಿ ಸಂಪ್ರದಾಯದಿಂದ ಆಗತವಾದ ತತ್ವಜ್ಞಾನವು ವಿಪರೀತಜ್ಞಾನ ಹಾಗೂ ಭ್ರಮೆಗಳಿಂದ ಕಲುಷಿತವಾಯಿತು. ಶ್ರೀಹರಿಯು ಸರ್ವೋತ್ತಮನೋ ? ಅಲ್ಲವೋ ? ಎಂಬ ಸಂಶಯವೂ, ಇದು ತತ್ವಜ್ಞಾನವೇ ಅಲ್ಲವೆಂಬ ವಿಪರೀತಜ್ಞಾನವೂ ಉಂಟಾಯಿತು.

ಈ ಸಂದರ್ಭದಲ್ಲಿ ಬ್ರಹ್ಮರುದ್ರಾದಿ ದೇವತೆಗಳು ಸಜ್ಜನರ ಮೇಲಿನ ಅನುಕಂಪೆಯಿಂದ ಕ್ಷೀರಸಮುದ್ರಶಾಯಿಯಾದ ನಾರಾಯಣನನ್ನು ಮೊರೆಹೊಕ್ಕರು. ದೇವತೆಗಳ ವಿಜ್ಞಾಪನೆಯ ಪ್ರಕಾರವಾಗಿ ಜಗದೊಡೆಯನಾದ ಮಹಾವಿಷ್ಣುವು ಸತ್ಯವತಿಯಲ್ಲಿ ಪರಾಶರರಿಂದ ವೇದವ್ಯಾಸರಾಗಿ ಅವತರಿಸಿದನು. ಅವತಾರಮಾಡಿದ ಕೂಡಲೇ ಗುರುಗಳ ಉಪದೇಶ ಮೊದಲಾದವುಗಳನ್ನೂ ಕೂಡ ಪಡೆಯದೇ ಬದರಿಕಾಶ್ರಮಕ್ಕೆ ತೆರಳಿ ಅಪಪಾಠಗಳಿಂದ ತಿರೋಹಿತವಾದ ವೇದಗಳನ್ನು ತಮ್ಮ ಉಚ್ಚಾರಣೆಯ ಮೂಲಕ ಅಭಿವ್ಯಕ್ತಿಗೊಳಿಸಿದರು. ಅನಂತರ ನಾಲ್ಕು ವಿಭಾಗವನ್ನು ಮೊದಲೇ ಹೊಂದಿರುವ ವೇದಭಾಗಗಳನ್ನು ಸಂಗ್ರಹಿಸಿ ಪುನಃ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ ಎಂಬುದಾಗಿ ನಾಲ್ಕು ಭಾಗಗಳಾಗಿ ವಿಂಗಡನೆ ಮಾಡಿದರು. ಇದನ್ನು ಅವಾಂತರವೇದ ಎಂದು ಶಾಸ್ತ್ರದಲ್ಲಿ ಕರೆಯಲಾಗಿದೆ. ಪುನಃ ಋಗ್ವೇದವನ್ನು ಇಪ್ಪತ್ನಾಲ್ಕು ಶಾಖೆಗಳನ್ನಾಗಿ, ಯಜುರ್ವೇದವನ್ನು ನೂರ ಒಂದು ಶಾಖೆಗಳನ್ನಾಗಿ, ಸಾಮವೇದವನ್ನು ಸಾವಿರ ಶಾಖೆಗಳನ್ನಾಗಿ, ಅಥರ್ವವೇದವನ್ನು ಹನ್ನೆರಡು ಶಾಖೆಗಳನ್ನಾಗಿ ವಿಭಾಗ ಮಾಡಿದರು. ಇದನ್ನು ಋಗ್ಭಾಷ್ಯದಲ್ಲಿ ಶ್ರೀಮದಾಚಾರ್ಯರು ಸ್ಪಷ್ಟವಾಗಿ ಹೀಗೆ ಹೇಳಿದ್ದಾರೆ -

ಋಚಃ ಸ ಋಚ ಉದ್ಧೃತ್ಯ ಋಗ್ವೇದಂ ಕೃತವಾನ್ ಪ್ರಭುಃ ।
ಯಜೂಂಷಿ ನಿಗದಾಚ್ಚೈವ ತಥಾ ಸಾಮಾನಿ ಸಾಮತಃ ॥

ಮೊದಲೇ ಉಪವೇದ ರೂಪದಲ್ಲಿ ಇದ್ದ ಋಕ್‌ನಿಂದ ಋಗ್ವೇದವನ್ನು, ನಿಗದದಿಂದ ಯಜುರ್ವೇದನ್ನು, ಸಾಮದಿಂದ ಸಾಮವೇದವನ್ನು ಪ್ರಭುಗಳಾದ ವೇದವ್ಯಾಸದೇವರು ಉದ್ಧಾರಮಾಡಿದರು.

ಅಥರ್ವಣಭಾಷ್ಯದಲ್ಲಿಯೂ ಶ್ರೀಮದಾಚಾರ್ಯರು ವೇದವ್ಯಾಸದೇವರು ಮಾಡಿರುವ ವೇದವಿಭಾಗದ ಕ್ರಮವನ್ನು ಸ್ಪಷ್ಟವಾಗಿ ತಿಳಿಸಿಕೊಟ್ಟಿದ್ದಾರೆ -

ಏಕೋ ವೇದಃ ಕೃತೇ ಹ್ಯಾಸೀತ್ ತ್ರೇತಾಯಾಂ ಸ ತ್ರಿಧಾऽಭವತ್ ।
ಸ ಏವ ಪಂಚಧಾ ಜಾತೋ ದ್ವಾಪರಂ ಪ್ರಾಪ್ಯ ವೈಯುಗವ್ ।
ಉತ್ಪನ್ನಃ ಸ ಕಲಿಂ ಪ್ರಾಪ್ಯ ವೇದಃ ಪ್ರಾಯೇಣ ಸರ್ವಶಃ ॥

ಕೃತಯುಗದಲ್ಲಿ ಮೂಲವೇದ ಮಾತ್ರ ಅಸ್ತಿತ್ವವನ್ನು ಹೊಂದಿತ್ತು. ತ್ರೇತಾಯುಗದಲ್ಲಿ ಋಕ್, ನಿಗದ, ಸಾಮ ಎಂಬ ಮೂರು ಕವಲಾಯಿತು. ದ್ವಾಪರಯುಗದಲ್ಲಿ ಋಗ್ವೇದ, ಯಜರ್ವೇದ, ಸಾಮವೇದ, ಅಥರ್ವವೇದ, ಮಹಾಭಾರತ ಎಂಬುದಾಗಿ ಐದು

ಪ್ರಭೇದಗಳನ್ನು ಪಡೆಯಿತು. ಕಲಿಯುಗದಲ್ಲಿ ಈ ವೇದವು ಸಂಪೂರ್ಣವಾಗಿ ನಾಶದ ಸ್ಥಿತಿಯನ್ನು ತಲುಪಿತು.

## *ಬ್ರಹ್ಮಮೀಮಾಂಸಾಶಾಸ್ತ್ರ*

ವೇದವ್ಯಾಸದೇವರು ವೇದವಿಭಾಗವನ್ನು ಮಾಡಿದ ಮೇಲೆ ಅನುಪಮವಾದ ಬ್ರಹ್ಮಮೀಮಾಂಸಾಶಾಸ್ತ್ರವನ್ನು ರಚನೆ ಮಾಡಿದರು. ಸಮಗ್ರವೇದಗಳ ಅರ್ಥವನ್ನು ಸುಲಭವಾಗಿ ತಿಳಿಯುವಂತೆ ವಿಷ್ಣುಸರ್ವೋತ್ತಮತ್ವದ ವಿಷಯದಲ್ಲಿ ಅಜ್ಞಾನ-ವಿಪರೀತಜ್ಞಾನ ಲವಲೇಶವೂ ಮೂಡದಂತೆ ಅತ್ಯುತ್ತಮವಾದ ಬ್ರಹ್ಮಮೀಮಾಂಸಾಶಾಸ್ತ್ರವನ್ನು ಸಜ್ಜನರ ಮೇಲಿನ ಅನುಕಂಪೆಯಿಂದ ರಚಿಸಿದರು. ಈ ಶಾಸ್ತ್ರದಲ್ಲಿರುವ ಪ್ರತಿಯೊಂದು ಸೂತ್ರಗಳೂ ಮಂತ್ರತುಲ್ಯವಾಗಿವೆ. ಒಂದು ಅಕ್ಷರದ ಪಾರಾಯಣದಿಂದಲೇ ನೂರು ಗಾಯತ್ರೀಮಂತ್ರದ ಫಲ ದೊರೆಯುತ್ತದೆ. ''ಪ್ರತ್ಯಕ್ಷರಂ ತು ಲಭತೇ ಗಾಯತ್ರೀಶತಜಂ ಫಲಮ್'' ಹೀಗೆ ಪುರಾಣಗಳು ಬ್ರಹ್ಮಸೂತ್ರದ ಮಹಿಮೆಯನ್ನು ಕೊಂಡಾಡಿವೆ. ಪ್ರತಿಯೊಂದು ಸೂತ್ರಗಳೂ ಕೂಡ ಹರಿಮಂದಿರದಂತೆ ಕಂಗೊಳಿಸುತ್ತಿವೆ. ಒಂದೊಂದು ಅಧಿಕರಣದಲ್ಲಿಯೂ ಪ್ರತಿಯೊಂದು ಸೂತ್ರಗಳಲ್ಲಿಯೂ, ಪ್ರತಿಯೊಂದು ಪದಗಳಲ್ಲಿಯೂ ವಾಸುದೇವ, ಸಂಕರ್ಷಣ, ಪ್ರದ್ಯುಮ್ನ, ಅನಿರುದ್ಧ ಎಂಬ ಭಗವಂತನ ನಾಲ್ಕು ರೂಪಗಳು ದಿವ್ಯಸನ್ನಿಧಾನವನ್ನು ಪಡೆದಿದೆ. ಅಥವಾ ನಾರಾಯಣನನ್ನು ಸೇರಿಸಿಕೊಂಡು ಐದು ರೂಪಗಳು ನೆಲೆಸಿವೆ. ಈ ಐದು ರೂಪಗಳೇ ಬ್ರಹ್ಮಸೂತ್ರಗಳಿಂದ ಪ್ರತಿಪಾದ್ಯವೂ ಆಗಿವೆ.

**ವಾಸುದೇವಾದಿರೂಪೇಣ ಚತುರ್ಮೂರ್ತಿಶ್ಚ ಸರ್ವಶಃ ।**
**ಅಥವಾ ಪಂಚಮೂರ್ತಿಃ ಸ ಪ್ರೋಕ್ತೋಽಧಿಕರಣಂ ಪ್ರತಿ ।**
**ಪ್ರತಿಸೂತ್ರಂ ಪ್ರತಿಪದಂ ಪ್ರತ್ಯಕ್ಷರಮಥಾಪಿ ವಾ ॥** - (ಅನುವ್ಯಾಖ್ಯಾನ)

## *ಸೂತ್ರಗಳಲ್ಲಿ ಓಂಕಾರ ಉಚ್ಚಾರಣೆ*

ಪ್ರತಿಯೊಂದು ಸೂತ್ರಗಳು ಮಂತ್ರತುಲ್ಯವಾಗಿರುವುದರಿಂದಲೇ ಆದ್ಯಂತಗಳಲ್ಲಿ ಓಂಕಾರವನ್ನು ಉಚ್ಚರಿಸಬೇಕೆಂದು ಶ್ರೀಮದಾಚಾರ್ಯರು ಅಪ್ಪಣೆ ನೀಡಿದ್ದಾರೆ. ಪ್ರಾರಂಭದಲ್ಲಿ ಓಂಕಾರವನ್ನು ಉಚ್ಚಾರ ಮಾಡದಿದ್ದರೆ ಸಂಪಾದಿಸಿದ ಪುಣ್ಯವು ಹ್ರಾಸವಾಗುತ್ತದೆ. ಕೊನೆಯಲ್ಲಿ ಓಂಕಾರವನ್ನು ಉಚ್ಚಾರ ಮಾಡದಿದ್ದರೆ ಪಾಪಭಾಗಿಯಾಗುತ್ತಾನೆ. ಆದ್ದರಿಂದ ಆದ್ಯಂತಗಳಲ್ಲಿಯೂ ಓಂಕಾರವನ್ನು ಉಚ್ಚಾರ ಮಾಡಲೇಬೇಕು. ಇದನ್ನು ತಿಳಿಸಿದವರು

ಶ್ರೀಮದಾಚಾರ್ಯರು ಮಾತ್ರ. ಬೇರೆ ಭಾಷ್ಯಕಾರರು ಬ್ರಹ್ಮಸೂತ್ರಗಳನ್ನು ಪಾಣಿನಿ ಸೂತ್ರದಂತೆ, ಓಂಕಾರದ ಉಚ್ಚಾರಣೆಯು ಅನಾವಶ್ಯಕವೆಂದು ಹೇಳುತ್ತಾರೆ.

ಈ ಪುಸ್ತಕದಲ್ಲಿ ಸೂತ್ರಗಳ ಪ್ರಾರಂಭದಲ್ಲಿ ಮತ್ತು ಕೊನೆಯಲ್ಲಿ ಓಂಕಾರವನ್ನು ಮುದ್ರಣೆ ಮಾಡಿರುವುದಿಲ್ಲ. ಏಕೆಂದರೆ ಪ್ರಾಚೀನ ಹಸ್ತಪ್ರತಿಗಳಲ್ಲಿ ಓಂಕಾರ ಸಹಿತವಾಗಿ ಸೂತ್ರವನ್ನು ಉಲ್ಲೇಖಿಸಿಲ್ಲ. ಕೇವಲ ಜಪ-ಪಾರಾಯಣಾದಿಗಳಲ್ಲಷ್ಟೇ ಓಂಕಾರದ ಉಚ್ಚಾರಣೆಯು ವಿಹಿತವಾಗಿದೆ ಹೊರತು ಸೂತ್ರದ ಪದಗಳ ಜೊತೆ ಅದು ಅರ್ಥವನ್ನು ಪಡೆದಿಲ್ಲ. ಆದ್ದರಿಂದ ಬ್ರಹ್ಮಸೂತ್ರಗಳನ್ನು ಪಠಣೆ ಮಾಡುವಾಗ ಓಂಕಾರ ಸಹಿತವಾಗಿಯೇ ಪಠಣೆ ಮಾಡಬೇಕು. ಆದರೆ ಅದನ್ನು ಬರೆಯುವ ಕ್ರಮವಿಲ್ಲ.

*ಸೂತ್ರಸಂಖ್ಯೆಯಲ್ಲಿ ಬ್ರಹ್ಮಸೂತ್ರಗಳ ಸಂಖ್ಯೆ ಎಷ್ಟು?*

೧. ಭಾಸ್ಕರಾಚಾರ್ಯರು - ೫೪೪
೨. ವಿಜ್ಞಾನಭಿಕ್ಷುಗಳು - ೫೫೬
೩. ನಿಂಬಾರ್ಕಾಚಾರ್ಯರು - ೫೪೯
೪. ವಲ್ಲಭಾಚಾರ್ಯರು - ೫೫೫
೫. ಶ್ರೀಕಂಠರು - ೫೪೫
೬. ಶಂಕರಾಚಾರ್ಯರು - ೫೫೫
೭. ರಾಮಾನುಜಾಚಾರ್ಯರು - ೫೪೫
೮. ಶ್ರೀಮದಾಚಾರ್ಯರು - ೫೬೪ - ೫೬೨ ಸೂತ್ರಗಳು

ಬ್ರಹ್ಮಸೂತ್ರಗಳು ೫೬೪ ಎಂಬುದು ಸರ್ವಜನಪ್ರಸಿದ್ಧವಾದ ವಿಚಾರ. ಆದರೆ ತ್ರಿವಿಕ್ರಮಪಂಡಿತರ ತತ್ವಪ್ರದೀಪವನ್ನು ನೋಡಿದಾಗ ೫೬೨ ಸೂತ್ರಗಳೆಂದು ತಿಳಿಯುತ್ತದೆ.

'ಯುಕ್ತೇಶ್ಚ' (೨-೩-೧೯) 'ಸ್ಮರಣಾಚ್ಚ' (೩-೧-೨೩) ಇವೆರಡು ಸೂತ್ರಗಳನ್ನು ತ್ರಿವಿಕ್ರಮಪಂಡಿತರು ಪರಿಗಣನೆ ಮಾಡಿರುವುದಿಲ್ಲ; ಭಾಷ್ಯದ ವಾಕ್ಯವನ್ನಾಗಿ ಪರಿಗಣಿಸಿದ್ದಾರೆ. ಮತ್ತು ಶ್ರೀಮದಾಚಾರ್ಯರ ಸಾಕ್ಷಾತ್ ಶಿಷ್ಯಂದಿರಾದ ಶ್ರೀ ಹೃಷೀಕೇಶತೀರ್ಥರು ಬರೆದಿರುವ ಸರ್ವಮೂಲಗ್ರಂಥದ ಹಸ್ತಪ್ರತಿಯಲ್ಲಿ ಈ ಎರಡು ಸೂತ್ರಗಳನ್ನು ಉಲ್ಲೇಖ ಮಾಡಿರುವುದಿಲ್ಲ. ಆದ್ದರಿಂದ ಹೃಷೀಕೇಶತೀರ್ಥರ ಪಾಠದಂತೆ ಮತ್ತು ತತ್ವಪ್ರದೀಪಕಾರರ ಪಾಠದಂತೆ ೫೬೨ ಸೂತ್ರಗಳು. ಉಳಿದ ಟಿಪ್ಪಣಿಕಾರರ ದೃಷ್ಟಿಯಲ್ಲಿ ೫೬೪ ಸೂತ್ರಗಳು.

## ಬ್ರಹ್ಮಸೂತ್ರದ ವಿಭಾಗ

ಒಂದು ನಿರ್ದಿಷ್ಟವಾದ ವಿಷಯವನ್ನು ನಿರ್ಣಯ ಮಾಡುವ ಘಟ್ಟಕ್ಕೆ ಅಧಿಕರಣ ಎಂದು ಕರೆಯುತ್ತಾರೆ. ಕೆಲವೆಡೆ ಒಂದೇ ಸೂತ್ರದಲ್ಲಿ ವಿಷಯವನ್ನು ನಿರ್ಧಾರ ಮಾಡುತ್ತಾರೆ. ಕೆಲವೆಡೆ ಅನೇಕ ಸೂತ್ರಗಳಿಂದ ಒಂದು ವಿಷಯಗಳನ್ನು ನಿರ್ಧಾರ ಮಾಡುತ್ತಾರೆ. ಆದ್ದರಿಂದ ಒಂದು ಅಧಿಕರಣದಲ್ಲಿ ಒಂದು ಸೂತ್ರವೂ ಇರಬಹುದು ಹೆಚ್ಚು ಸೂತ್ರಗಳೂ ಕೂಡ ಇರಬಹುದು.

ಸೂತ್ರಗಳನ್ನು ನಾಲ್ಕು ಅಧ್ಯಾಯಗಳಾಗಿ ವಿಂಗಡಿಸಿದ್ದಾರೆ. ಪ್ರತಿಯೊಂದು ಅಧ್ಯಾಯದಲ್ಲಿ ನಾಲ್ಕು ಪಾದಗಳಿವೆ. ಅಧ್ಯಾಯಗಳು ಯಾವುದೆಂದರೆ ೧. ಸಮನ್ವಯಾಧ್ಯಾಯ, ೨. ಅವಿರೋಧಾಧ್ಯಾಯ, ೩. ಸಾಧನಾಧ್ಯಾಯ, ೪. ಫಲಾಧ್ಯಾಯ.

ಅಧಿಕರಣವೆಂದರೆ -

ವಿಷಯೋ ವಿಶಯಶ್ಚೈವ ಪೂರ್ವಪಕ್ಷಸ್ತಥೋತ್ತರಮ್ ।
ಪ್ರಯೋಜನಂ ಚ ಪಂಚೈತಾನ್ ತಂತ್ರೇಽಧಿಕರಣಂ ವಿದುಃ ॥

೧. ವಿಷಯ, ೨. ಸಂಶಯ, ೩. ಪೂರ್ವಪಕ್ಷ, ೪. ಸಿದ್ಧಾಂತ, ೫. ಪ್ರಯೋಜನ. ಈ ಐದೂ ಉಳ್ಳದ್ದನ್ನು ಅಧಿಕರಣವೆನ್ನುವರು.

### ಸಮನ್ವಯಧ್ಯಾಯ

| | ಅಧಿಕರಣಗಳು | ಸೂತ್ರಗಳು |
|---|---|---|
| ಅನ್ಯತ್ರಪ್ರಸಿದ್ಧ ನಾಮಪಾದ | ೧೨ | ೩೧ |
| ಅನ್ಯತ್ರಪ್ರಸಿದ್ಧಲಿಂಗಪಾದ | ೭ | ೩೨ |
| ಉಭಯತ್ರಪ್ರಸಿದ್ಧ ನಾಮಲಿಂಗಾತ್ಮಕಪಾದ | ೧೪ | ೪೩ |
| ಅನ್ಯತ್ರೈವಪ್ರಸಿದ್ಧನಾಮಲಿಂಗಪಾದ | ೭ | ೨೯ |
| ಒಟ್ಟು | ೪೦ | ೧೩೫ |

### ಅವಿರೋಧಾಧ್ಯಾಯ

| | | |
|---|---|---|
| ಯುಕ್ತಿಪಾದ | ೧೧ | ೩೮ |
| ಸಮಯಪಾದ | ೧೨ | ೪೫ |
| ಪರಸ್ಪರಶ್ರುತ್ಯವಿರೋಧಪಾದ | ೧೯ | ೫೩ |
| ನ್ಯಾಯೋಪೇತಶ್ರುತ್ಯವಿರೋಧಪಾದ | ೧೩ | ೨೩ |
| ಒಟ್ಟು | ೫೫ | ೧೫೯ |

ಸಾಧನಾಧ್ಯಾಯ

| | | |
|---|---|---|
| ವೈರಾಗ್ಯಪಾದ | ೨೦ | ೨೯ |
| ಭಕ್ತಿಪಾದ | ೨೦ | ೪೨ |
| ಉಪಾಸನಾಪಾದ | ೪೨ | ೬೮ |
| ಜ್ಞಾನಪಾದ | ೧೧ | ೫೧ |
| ಒಟ್ಟು | ೯೩ | ೧೯೦ |

ಫಲಾಧ್ಯಾಯ

| | | |
|---|---|---|
| ಕರ್ಮಕ್ಷಯಪಾದ | ೮ | ೧೯ |
| ಉತ್ಕ್ರಾಂತಿಪಾದ | ೧೦ | ೨೨ |
| ಮಾರ್ಗಪಾದ | ೬ | ೧೬ |
| ಭೋಗಪಾದ | ೧೧ | ೨೩ |
| ಒಟ್ಟು | ೩೫ | ೮೦ |

### *ಅಧಿಕರಣಸಂಗತಿ*

ಪ್ರತಿಯೊಂದು ಅಧಿಕರಣಗಳಿಗೂ ಪರಸ್ಪರ ಸಂಬಂಧವಿರುತ್ತದೆ. ಆ ಸಂಬಂಧವನ್ನೇ ಸಂಗತಿಯೆಂದು ಕರೆಯುತ್ತಾರೆ. ಒಂದು ಅಧಿಕರಣಕ್ಕೆ ಸಮಗ್ರಶಾಸ್ತ್ರದಿಂದ ಸಂಬಂಧವಿರಬೇಕು. ಅಧ್ಯಾಯದ ಜೊತೆ ಸಂಬಂಧವಿರಬೇಕು, ಆ ಪಾದದ ಜೊತೆ ಸಂಬಂಧವಿರಬೇಕು, ಮತ್ತು ಹಿಂದಿನ ಮುಂದಿನ ಅಧಿಕರಣಗಳ ಜೊತೆಗೂ ಸಂಬಂಧವಿರಬೇಕು. ಮತ್ತು ಹಿಂದಿನ ಅಧಿಕರಣದಲ್ಲಿ ಯಾವ ವೇದವಾಕ್ಯದ ಅರ್ಥವನ್ನು ನಿರ್ಣಯ ಮಾಡಿರುತ್ತಾರೋ, ಆ ವೇದವಾಕ್ಯಕ್ಕೆ ಮುಂದಿನ ಅಧಿಕರಣದಲ್ಲಿ ವಿಚಾರ ಮಾಡುವ ವೇದವಾಕ್ಯದ ಜೊತೆ ಸಂಬಂಧವಿರಬೇಕು. ಇವುಗಳನ್ನು ಕ್ರಮವಾಗಿ ಶಾಸ್ತ್ರಸಂಗತಿ, ಅಧ್ಯಾಯಸಂಗತಿ, ಪಾದಸಂಗತಿ, ಅಧಿಕರಣಸಂಗತಿ ಎಂದು ಕರೆಯುತ್ತಾರೆ.

ಸಮಗ್ರವಾದ ಶಾಸ್ತ್ರ, ಅಧ್ಯಾಯ ಹಾಗೂ ಪಾದಗಳಿಗಿರುವ ಸಂಗತಿಗೆ ಅಂತರ್ಭಾವಸಂಗತಿ ಎಂದು ಒಂದೇ ಹೆಸರಿನಿಂದ ಕರೆಯುತ್ತಾರೆ. ಹಿಂದಿನ-ಮುಂದಿನ ಅಧಿಕರಣಗಳ ಜೊತೆಗೆ ಹಾಗೂ ವಿಷಯವಾಕ್ಯಗಳ ಜೊತೆ ಇರುವ ಸಂಗತಿಯನ್ನು 'ಆನಂತರ್ಯಸಂಗತಿ' ಎಂದು ಕರೆಯುತ್ತಾರೆ. ಈ ಆನಂತರ್ಯಸಂಗತಿಯು ಆಕ್ಷೇಪಿಕೀ, ಆತಿದೇಶಕೀ, ಔಪೋದ್ಘಾತಕೀ, ಆಪವಾದಿಕೀ ಇತ್ಯಾದಿಯಾಗಿ ಅನೇಕ ಬಗೆಯಲ್ಲಿರುತ್ತದೆ.

೧. ಜಿಜ್ಞಾಸಾಧಿಕರಣ, ೨. ಜನ್ಮಾದ್ಯಧಿಕರಣ, ೩. ಶಾಸ್ತ್ರಯೋನಿತ್ವಾಧಿಕರಣ, ೪. ಸಮನ್ವಯಾಧಿಕರಣ, ೫. ಈಕ್ಷತ್ಯಧಿಕರಣ ಹೀಗೆ ಪ್ರಾರಂಭದ ಐದು ಅಧಿಕರಣಗಳು ಸಮಗ್ರಶಾಸ್ತ್ರಕ್ಕೆ ಪೀಠಿಕಾರೂಪದಲ್ಲಿ ರಚಿತವಾಗಿವೆ. ಈ ಐದು ಅಧಿಕರಣಗಳಲ್ಲಿ ಯಾವುದೇ ಶಬ್ದದ ಸಮನ್ವಯವನ್ನು ನಿರೂಪಣೆ ಮಾಡುತ್ತಿಲ್ಲ. ಆದ್ದರಿಂದ ಸಮನ್ವಯಾಧ್ಯಾಯದ ಜೊತೆ ಹಾಗೂ ಪಾದದ ಜೊತೆ ಸಂಗತಿಯನ್ನು ಇವುಗಳು ಹೊಂದಿರುವುದಿಲ್ಲ. ಆದ್ದರಿಂದ ಅಧ್ಯಾಯಸಂಗತಿ ಹಾಗೂ ಪಾದಸಂಗತಿಗಳನ್ನು ಆನಂದಮಯಾಧಿಕರಣದಿಂದ ಮುಂದಿನ ಅಧಿಕರಣಗಳಲ್ಲಿ ಚಿಂತನೆ ಮಾಡಬೇಕು. ಪ್ರಾರಂಭದ ಜಿಜ್ಞಾಸಾಧಿಕರಣದಲ್ಲಿ ಅಧಿಕರಣ-ಸಂಗತಿಯೂ ಕೂಡ ಇರುವುದಿಲ್ಲವೆಂಬುದು ಗಮನಾರ್ಹ.

### *೨೧ ಕುಭಾಷ್ಯಗಳು*

ಏಕವಿಂಶತಿಕುಭಾಷ್ಯದೂಷಕಂ ।
ಬ್ರಹ್ಮಸೂತ್ರಗಣಭಾಷ್ಯಮದ್ಭುತಮ್ ॥
ಅಪ್ಯದೂಷ್ಯಮತನೋದನಂತಧೀ -।
ರ್ಭೂತಭಾವಿಭವದಾತ್ಮಭಿಃ ಕ್ವಚಿತ್ ॥

ಶ್ರೀಪೂರ್ಣಪ್ರಜ್ಞರು ಇಂತಹ ಅದ್ಭುತವಾದ ಬ್ರಹ್ಮಸೂತ್ರಭಾಷ್ಯವನ್ನು ಮಾಡಿದರು. ಅದರಲ್ಲಿ ಅವರು ಭಾರತೀವಿಜಯ, ಸಂವಿದಾನಂದ, ಬ್ರಹ್ಮಘೋಷ, ಶತಾನಂದ, ಉದ್ವರ್ತ, ವಿಜಯ, ರುದ್ರಭಟ್ಟ, ವಾಮನ, ಯಾದವಪ್ರಕಾಶ, ರಾಮಾನುಜ, ಭರ್ತೃಪ್ರಪಂಚ, ದ್ರವಿಡ, ಬ್ರಹ್ಮದತ್ತ, ಭಾಸ್ಕರ, ಪಿಶಾಚ, ವೃತ್ತಿಕಾರಕ, ವಿಜಯಭಟ್ಟ, ವಿಷ್ಣುಕ್ರಾಂತ, ವಾದೀಂದ್ರ, ಮಾಧವದಾಸಕ, ಸಂಕರ ಈ ಇಪ್ಪತ್ತೊಂದು ಜನರು ಮಾಡಿರುವ ಬ್ರಹ್ಮಸೂತ್ರಭಾಷ್ಯಗಳನ್ನು ಖಂಡಿಸಿದ್ದಾರೆ. ಹಿಂದಿನ ಮುಂದಿನ ಮತ್ತು ಇಂದಿನ ಯಾವ ವಿದ್ವಾಂಸರೂ ಅದರ ಒಂದು ವಾಕ್ಯವನ್ನೂ ದೂಷಿಸಲಾರರು. ಅವರ ರೂಪವೂ ಹೀಗೆಯೇ ಇರುವುದು.

ಇಂಥ ಶ್ರೇಷ್ಠವಾದ ಬ್ರಹ್ಮಸೂತ್ರಗಳಿಗೆ ಅನೇಕರು ಸ್ವಕಪೋಲ ಕಲ್ಪಿತವಾದ ಅರ್ಥಗಳನ್ನು ಬರೆಯುವ ಮೂಲಕ ಕುಭಾಷ್ಯಗಳನ್ನು ರಚನೆ ಮಾಡಿದ್ದಾರೆ. ಅವುಗಳು ಹೀಗಿವೆ - ೧) ಭಾರತೀವಿಜಯ ೨) ಸಚ್ಚಿದಾನಂದ ೩) ಬ್ರಹ್ಮಘೋಷ ೪) ಶತಾನಂದ ೫) ಉದ್‌ವರ್ತ ೬) ವಿಜಯ ೭) ರುದ್ರಭಟ್ಟ ೮) ವಾಮನ ೯) ಯಾದವಪ್ರಕಾಶ ೧೦) ರಾಮಾನುಜ ೧೧) ಭರ್ತೃಪ್ರಪಂಚ ೧೨) ದ್ರವಿಡ ೧೩) ಬ್ರಹ್ಮದತ್ತ ೧೪) ಭಾಸ್ಕರ

೧೫) ವಿಶಾಖ ೧೬) ವೃತ್ತಿಕಾರಕ ೧೭) ವಿಜಯಭಟ್ಟ ೧೮) ವಿಷ್ಣುಕ್ರಾಂತ ೧೯) ವಾದೀಂದ್ರ ೨೦) ಮಾಧವದಾಸ ೨೧) ಸಂಕರ.

ಶ್ರೀಮದಾಚಾರ್ಯರ ಭಾಷ್ಯ ಅಂತಿಮನಿರ್ಣಾಯಕ

'ಸತ್‌ಸೂತ್ರ ಭಾವೇ ಪ್ರವಿಚಾರಿತೇ ಪೃಥಗ್
ಭಾಷ್ಯಾಭಿಸಂಧೌ ಚ ವಿಶುದ್ಧಬುದ್ಧಿಭಿಃ ।
ನಿಗೃಹ್ಯ ಗೂಢಾಗ್ರಹಮುಗ್ರಮೇತಯೋ - ।
ರ್ಮಾನ್ಯೋಽನ್ವಯೋಽನ್ಯೋನ್ಯಮಹೋ ನ ದೃಶ್ಯತೇ ।'

ರಾಗದ್ವೇಷವಿಲ್ಲದ ನಿರ್ಮಲವಾದ ಮನಸ್ಸುಳ್ಳ ವಿದ್ವಾಂಸರು ಪಾಪಸಾಧಕವಾದ ಹಠವನ್ನು ಬಿಟ್ಟು, ಬ್ರಹ್ಮಸೂತ್ರಗಳನ್ನು ಹಾಗೂ ಶಂಕರಾಚಾರ್ಯರ ಭಾಷ್ಯವನ್ನು ಪರಸ್ಪರ ಹೊಂದಿಕೆಯಾಗುವಂತೆ ವಿಮರ್ಶೆ ಮಾಡಲಿ. ಆವಾಗ ಒಂದಕ್ಕೊಂದು ಸಂಬಂಧವಿಲ್ಲವೆಂಬುದು ಸ್ಪಷ್ಟವಾಗುತ್ತದೆ. ಆದರೂ ಕೂಡ ಇಂಥ ಭಾಷ್ಯವನ್ನು ಜನರು ಮನ್ನಣೆಮಾಡುತ್ತಿರುವುದು ಬಹಳ ಆಶ್ಚರ್ಯ !

## ಶ್ರೀಮದಾಚಾರ್ಯರ ಭಾಷ್ಯದ ಮಹಿಮೆ

ಪರಮಶ್ರೇಷ್ಠವಾದ ಬ್ರಹ್ಮಸೂತ್ರಗಳಿಗೆ ಶ್ರೀಮದಾಚಾರ್ಯರು ಎಲ್ಲಿಲ್ಲದ ಸ್ಥಾನಮಾನವನ್ನು ನೀಡಿರುತ್ತಾರೆ. ಆದ್ದರಿಂದಲೇ ಅನುವ್ಯಾಖ್ಯಾನದಲ್ಲಿ ಹೀಗೆ ಘೋಷಣೆ ಮಾಡಿರುವರು - 'ಅಥೋ ನೈತಾದೃಶಂ ಕಿಂಚಿತ್ ಪ್ರಮಾಣತಮವಿಶ್ಯತೇ । ಬ್ರಹ್ಮಸೂತ್ರಗಳಿಗಿಂತ ಅತ್ಯುತ್ತಮ ಪ್ರಮಾಣ ಮತ್ತೊಂದಿಲ್ಲ ಎಂದು.

ಹೀಗೆ ಘೋಷಣೆ ಮಾಡಿ ಸೂತ್ರಕಾರರಾದ ಬಾದರಾಯಣರಿಗೆ ಸಮ್ಮತವಾದ ಅರ್ಥವನ್ನು ತಮ್ಮ ಭಾಷ್ಯದ ಮೂಲಕ ತಿಳಿಸಿಕೊಟ್ಟಿದ್ದಾರೆ. ಸೂತ್ರಕಾರರಾದ ವೇದವ್ಯಾಸದೇವರಿಗೆ ಸಮ್ಮತವಲ್ಲದ ಭಾಷ್ಯಗಳು ಜಗತ್ತಿನಲ್ಲೆಲ್ಲೆಡೆ ಪ್ರಸಿದ್ಧವಾಗಿರುವಾಗ ಶ್ರೀಮದಾಚಾರ್ಯರ ಬಳಿ ಸಾಕ್ಷಾತ್ ವೇದವ್ಯಾಸದೇವರು ತಮ್ಮ ಅಪೇಕ್ಷೆಯನ್ನು ಹೀಗೆ ಹೇಳಿದರು - 'ಕುರುಸೂತ್ರಭಾಷ್ಯಂ ಅವಿಲಂಬಿತಂ ವ್ರಜೇಃ' 'ತಡಮಾಡದೇ ಸೂತ್ರಭಾಷ್ಯವನ್ನು ರಚನೆ ಮಾಡು' ಎಂದು. ಶ್ರೀಮದಾಚಾರ್ಯರು ಗೀತಾಭಾಷ್ಯವನ್ನು ಸಮರ್ಪಣೆ ಮಾಡಿದಾಗ ಅದರಿಂದ ಬಹಳಷ್ಟು ಸಂತೋಷಪಟ್ಟ ವೇದವ್ಯಾಸದೇವರು ಸೂತ್ರಭಾಷ್ಯವನ್ನು ರಚನೆ ಮಾಡುವಂತೆ ಪ್ರೇರಣೆ ನೀಡಿದರು. ಇದರಿಂದ ಶ್ರೀಮದಾಚಾರ್ಯರ ಭಾಷ್ಯವು ಉಳಿದ ಭಾಷ್ಯಗಳಿಗಿಂತ ಭಿನ್ನವಾಗಿದೆ. ಮತ್ತು ವೇದವ್ಯಾಸದೇವರಿಗೆ ಸಮ್ಮತವಾದ ಅರ್ಥದಿಂದ ಕೂಡಿದೆ ಎಂಬುದು ಸ್ಪಷ್ಟವಾಗುತ್ತದೆ.

ಸೂತ್ರಪ್ರಸ್ಥಾನಕ್ಕೆ ಹೀಗೆ ಅನೇಕ ಮಂದಿ ಭಾಷ್ಯವನ್ನು ಬರೆದಿದ್ದರೂ, ಶ್ರೀಮದಾಚಾರ್ಯರ ಭಾಷ್ಯವು ಸರ್ವೋತ್ಕೃಷ್ಟವಾಗಿದೆ. ಟೀಕಾ-ಟಿಪ್ಪಣಿಗಳ ಸಹಾಯವಿಲ್ಲದೇ ಪಂಡಿತವರೇಣ್ಯರಿಂದಲೂ ಅರ್ಥಮಾಡಿಕೊಳ್ಳಲು ಅಸಾಧ್ಯವಾಗಿದೆ. ಆದರೂ ಕೂಡ ಬಾಲಕರಿಗೂ ಅರ್ಥವಾಗುವಂಥ ಸುಂದರ ಶೈಲಿಯನ್ನು ಪಡೆದಿದೆ. ಇದನ್ನೇ ನಾರಾಯಣಾಪಂಡಿತಾಚಾರ್ಯರು ಹೀಗೆ ವರ್ಣಿಸಿದ್ದಾರೆ -

ಬಾಲಸಂಘಮಪಿ ಬೋಧಯದ್ಭೃಶಂ ।
ದುರ್ನಿರೂಪವಚನಂ ಚ ಪಂಡಿತೈಃ ॥
ಅಪ್ರಮೇಯಹೃದಯಂ ಪ್ರಸಾದವತ್ ।
ಸೌಮ್ಯಕಾಂತಿ ಚ ವಿಪಕ್ಷಭೀಷಣಮ್ ॥

ಶ್ರೀಮದಾಚಾರ್ಯರ ಭಾಷ್ಯವು ಮೂಢರಿಗೂ ಭಗವತ್ಸ್ವರೂಪವನ್ನು ಬೋಧಿಸುತ್ತಿದ್ದಿತು. ಪಂಡಿತರಿಗೂ ಅದರಲ್ಲಿರುವ ವಾಕ್ಯಗಳ ಅರ್ಥವನ್ನು ನಿರ್ಣಯಿಸಿ ಹೇಳಲು ಕಷ್ಟವಾಗಿದ್ದಿತು. ಅದರ ಭಾವಾರ್ಥವು ತಿಳಿಯಲು ಅಶಕ್ಯವಾಗಿದ್ದಿತು. ಸರಳಶಬ್ದ ಒಳ್ಳೆ ಯುಕ್ತಿಗಳಿಂದ ಕೂಡಿ ಪ್ರತಿವಾದಿಗಳಿಗೆ ಭಯವನ್ನುಂಟು ಮಾಡುತ್ತಿದ್ದಿತು.

ಇಂಥ ಬ್ರಹ್ಮಸೂತ್ರಭಾಷ್ಯವನ್ನು ಓದುವುದರ ಫಲವನ್ನು ನಾರಾಯಣಪಂಡಿತರು ಹೀಗೆ ವರ್ಣನೆ ಮಾಡಿದ್ದಾರೆ -

ಮಹಾನಂದತೀರ್ಥಸ್ಯ ಯೇ ಭಾಷ್ಯಭಾವಂ
ಮನೋ ವಾಗ್ಭಿರಾವರ್ತಯಂತೇ ಸ್ವಶಕ್ತ್ಯಾ ।
ಸುರಾದ್ಯಾ ನರಾಂತಾ ಮುಕುಂದಪ್ರಸಾದಾತ್
ಇಮಂ ಮೋಕ್ಷಮೇತೇ ಭಜಂತೇ ಸದೇತಿ ॥

ಸರ್ವಜೀವರಲ್ಲಿ ಉತ್ತಮರಾದ ಶ್ರೀಮದಾನಂದತೀರ್ಥರ ಬ್ರಹ್ಮಸೂತ್ರಭಾಷ್ಯದ ಅರ್ಥವನ್ನು ತಮ್ಮ ಶಕ್ತ್ಯಾನುಸಾರ ಯಾವಾಗಲೂ ಮನಸ್ಸಿನಿಂದ ಮನನ ಮಾಡುವ ಮತ್ತು ಮಾತಿನಿಂದ ಹೇಳುವ ದೇವತೆ ಮೊದಲ್ಗೊಂಡು ಮನುಷ್ಯರೇ ಕೊನೆಯಾಗುಳ್ಳವರೆಲ್ಲರೂ ಆ ವೈಕುಂಠಾಧಿಪನ ಅನುಗ್ರಹದಿಂದ ಯಾವಾಗಲೂ ಮೋಕ್ಷವನ್ನು ಪಡೆಯುವರು.

ಶ್ರೀಮದಾಚಾರ್ಯರು ತಮ್ಮ ಭಾಷ್ಯದಲ್ಲಿ ತಾವು ಪ್ರತಿಪಾದನೆ ಮಾಡಿದ ವಿಷಯದಲ್ಲಿ ಹೆಜ್ಜೆ-ಹೆಜ್ಜೆಗೂ ಪ್ರಮಾಣಗಳನ್ನು ನೀಡುತ್ತಾರೆ. ಈ ಸಂದರ್ಭದಲ್ಲಿ ತ್ರಿವಿಕ್ರಮಪಂಡಿತರು

ನುಡಿಯುವ ಮಾತು ಬಲು ರೋಮಾಂಚನಕಾರಿ - 'ಯದ್ಯಪಿ ಆಚಾರ್ಯಃ ಸ್ವೋಕ್ತಾರ್ಥೇ ಸ್ವಯಮೇವ ಪ್ರಮಾಣಮ್, ಸರ್ವಜ್ಞತ್ವಾತ್ ಅವಿಪ್ರಲಂಭಕತ್ವಾಚ್ಚ । ತಥಾಪಿ ಸ್ಕಾಂದೇಚೋಕ್ತಮಿತಿ ಪ್ರೌಢಿವಾದಂ ಕರೋತಿ' ಶ್ರೀಮದಾಚಾರ್ಯರು ಸರ್ವಜ್ಞರಾಗಿದ್ದಾರೆ ಮೋಸ ಮಾಡುವ ಸ್ವಭಾವ ಲವಲೇಶವೂ ಅವರಲ್ಲಿ ಇಲ್ಲ. ಆದ್ದರಿಂದ ತಾವು ಹೇಳಿದ ವಿಷಯದಲ್ಲಿ ತಾವೇ ಸ್ವತಃ ಪ್ರಮಾಣ, ಮತ್ತೊಂದು ಪ್ರಮಾಣವನ್ನು ಉಲ್ಲೇಖಿಸುವ ಅವಶ್ಯಕತೆಯಿಲ್ಲ. ಆದರೂ ಕೂಡ 'ತಚ್ಚೋಕ್ತಂ ಸ್ಕಾಂದೇ' ಇತ್ಯಾದಿ ಪ್ರೌಢೀವಾದವನ್ನು ಮಾಡುತ್ತಾರೆ.

ಇಂಥ ಶ್ರೇಷ್ಠವಾದ ಬ್ರಹ್ಮಸೂತ್ರಭಾಷ್ಯವನ್ನು ಅಧ್ಯಯನ ಮಾಡಿ ಧನ್ಯರಾಗೋಣ.

### *ತತ್ವಪ್ರದೀಪ*

ಶ್ರೀಮದಾಚಾರ್ಯರ ಅಪ್ಪಣೆಯಂತೆ ತ್ರಿವಿಕ್ರಮಪಂಡಿತರು 'ತತ್ವಪ್ರದೀಪ' ಎಂಬ ಟೀಕೆಯನ್ನು ಬ್ರಹ್ಮಸೂತ್ರಭಾಷ್ಯಕ್ಕೆ ಮೊಟ್ಟಮೊದಲು ಬರೆದರು. ತಾವು ಬರೆದ ಟೀಕೆಯನ್ನು ಶ್ರೀಮದಾಚಾರ್ಯರಿಗೆ ಸಮರ್ಪಣೆ ಮಾಡಿ ಸಂತೋಷ ಪಡಿಸಿದರು. ಶ್ರೀಮದಾಚಾರ್ಯರ ಸಮಕಾಲೀನರಾದ ತ್ರಿವಿಕ್ರಮಪಂಡಿತರು ರಚನೆ ಮಾಡಿರುವ ಈ ತತ್ವಪ್ರದೀಪ ಗ್ರಂಥ ಅತ್ಯಂತ ಗಂಭೀರವೂ ಅಪೂರ್ವವೂ ಆಗಿದೆ. ಬಹಳ ಗಹನವಾಗಿರುವುದರಿಂದ ಇದರ ಅಧ್ಯಯನದ ಪರಂಪರೆ ನಿಂತು ಹೋಗಿದೆ. ಆದರೆ ಶ್ರೀ ರಾಘವೇಂದ್ರ ಗುರುಸಾರ್ವಭೌಮರು ಎಲ್ಲೆಡೆಯೂ ತತ್ವಪ್ರದೀಪದ ವಿಶೇಷ ವಿಚಾರವನ್ನು ತಮ್ಮ ವ್ಯಾಖ್ಯಾನದಲ್ಲಿ ಎತ್ತಿತೋರಿಸುತ್ತಾರೆ. ತಾತ್ಪರ್ಯಚಂದ್ರಿಕೆಯಲ್ಲಿ ಶ್ರೀವ್ಯಾಸತೀರ್ಥರೂ ಕೂಡ ತತ್ವಪ್ರದೀಪಕಾರರು ಮಾಡುವ ವ್ಯಾಖ್ಯಾನದ ಸ್ವಾರಸ್ಯವನ್ನು ತೋರಿಸುತ್ತಾರೆ.

### *ತತ್ವಪ್ರಕಾಶಿಕಾ*

ಬ್ರಹ್ಮಸೂತ್ರಭಾಷ್ಯಕ್ಕೆ ಶ್ರೀತ್ರಿವಿಕ್ರಮಪಂಡಿತರ ಅನಂತರ ಶ್ರೀಮಟ್ಟೀಕಾಕೃತ್ಪಾದರೆಂದೇ ಪ್ರಸಿದ್ಧರಾದ ಶ್ರೀಜಯತೀರ್ಥಪೂಜ್ಯಚರಣರು 'ತತ್ವಪ್ರಕಾಶಿಕಾ' ಎಂಬ ಟೀಕೆಯನ್ನು ಬರೆದರು. ಶ್ರೀಮದಾಚಾರ್ಯರ ಭಾಷ್ಯವನ್ನು ಸುಲಭವಾಗಿ ಅರ್ಥಮಾಡಿಕೊಳ್ಳುವಂಥ ಸರಳಶೈಲಿಯಿಂದ ಕೂಡಿದೆ. ಈ ಗ್ರಂಥಕ್ಕೆ ಶ್ರೀ ವ್ಯಾಸತೀರ್ಥರು 'ತಾತ್ಪರ್ಯಚಂದ್ರಿಕಾ' ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ. ಬ್ರಹ್ಮಮೀಮಾಂಸಾಗ್ರಂಥದ ಅಧ್ಯಯನವು ಪರಿಪೂರ್ಣವಾಗಬೇಕೆಂದರೆ ತಾತ್ಪರ್ಯಚಂದ್ರಿಕಾ ಗ್ರಂಥವನ್ನು ಓದಲೇ ಬೇಕು. ಈ ಗ್ರಂಥದ ಪ್ರಾರಂಭದಲ್ಲಿ

ಶ್ರೀ ವ್ಯಾಸತೀರ್ಥರು ಶ್ರೀಮಟ್ಟೀಕಾಕೃತ್ಪಾದಕರನ್ನು ಹೀಗೆ ಪ್ರಶಂಸಿಸುತ್ತಾರೆ -

ಮಿಥ್ಯಾಸಿದ್ಧಾಂತದುರ್ಧ್ವಾಂತವಿಧ್ವಂಸನವಿಚಕ್ಷಣಃ।
ಜಯತೀರ್ಥಾಖ್ಯತರಣಿರ್ಭಾಸತಾಂ ನೋ(ಮೇ) ಹೃದಂಬರೇ ॥

ಸುಳ್ಳನ್ನು ಹೇಳುವ ಸಿದ್ಧಾಂತ, ಅಥವಾ ಸುಳ್ಳುಸಿದ್ಧಾಂತಗಳೆಂಬ ಕೆಟ್ಟ ಅಜ್ಞಾನವನ್ನು ಪರಿಹರಿಸುವುದರಲ್ಲಿ ನಿಪುಣರಾದ ಜಯತೀರ್ಥರೆಂಬ ಸೂರ್ಯರು ನಮ್ಮ ಹೃದಯದಲ್ಲಿ ಪ್ರಕಟವಾಗಲಿ ಎಂದು.

ಬ್ರಹ್ಮಸೂತ್ರಭಾಷ್ಯದ ಸಂಪೂರ್ಣ ಅರ್ಥವನ್ನು ವಿವರಿಸುವ ಏಕೈಕ ಕೃತಿ ಟೀಕಾಕೃತ್ಪಾದರ 'ತತ್ವಪ್ರಕಾಶಿಕಾ'. ಆದ್ದರಿಂದಲೇ ಈ ತತ್ವಪ್ರಕಾಶಿಕೆಗೆ ಮಾಧ್ವಸಂಪ್ರದಾಯದಲ್ಲಿ ಎಲ್ಲಿಲ್ಲದಷ್ಟು ಗೌರವವಿದೆ. ಮೂವತ್ತಕ್ಕೂ ಹೆಚ್ಚು ಟಿಪ್ಪಣಿಗಳನ್ನು ಅನೇಕ ಜ್ಞಾನಿಗಳು ಈ ಗ್ರಂಥಕ್ಕೆ ಬರೆದಿದ್ದಾರೆ. -

೧. ತಾತ್ಪರ್ಯಚಂದ್ರಿಕಾ (ಶ್ರೀ ವ್ಯಾಸತೀರ್ಥರು)
೨. ಭಾವಬೋಧ (ಶ್ರೀರಘೂತ್ತಮತೀರ್ಥರು)
೩. ಗುರ್ವರ್ಥದೀಪಿಕಾ (ಶ್ರೀವಾದಿರಾಜತೀರ್ಥರು)
೪. ಭಾವದೀಪ (ಶ್ರೀರಾಘವೇಂದ್ರತೀರ್ಥರು)
೫. ಅಭಿನವಚಂದ್ರಿಕಾ (ಶ್ರೀಸತ್ಯನಾಥತೀರ್ಥರು)
೬. ಶೇಷತಾತ್ಪರ್ಯಚಂದ್ರಿಕಾ (ಶ್ರೀರಘುನಾಥತೀರ್ಥರು)
೭. ಭಾವರತ್ನಕೋಶ (ಶ್ರೀಸುಮತೀಂದ್ರತೀರ್ಥರು)
೮. ತತ್ವಪ್ರಕಾಶಿಕಾವ್ಯಾಖ್ಯಾ (ಶ್ರೀಸತ್ಯಪ್ರಿಯತೀರ್ಥರು)
೯. ತತ್ವಪ್ರಕಾಶಿಕಾ ಟಿಪ್ಪಣಿ (ಶ್ರೀಬ್ರಹ್ಮಣ್ಯತೀರ್ಥರು)
೧೦. ಚಂದ್ರಿಕಾಬಿಂದು (ಶ್ರೀಸತ್ಯಪ್ರಿಯತೀರ್ಥರು)
೧೧. ಚಂದ್ರಿಕಾಟಿಪ್ಪಣಿ (ಶೇಷದಾಸಾರ್ಯ ಆದ್ಯ)
೧೨. ಚಂದ್ರಿಕಾವ್ಯಾಖ್ಯಾನ (ಶ್ರೀಸುಬ್ರಹ್ಮಣ್ಯಾಚಾರ್ಯ ಗುಜ್ಜಾರಿ)
೧೩. ಶರದಾಗಮಚಂದ್ರಿಕಾಟಿಪ್ಪಣಿ (ಶ್ರೀವ್ಯಾಸತತ್ವಜ್ಞರು)
೧೪. ದ್ವೈತಭೂಷಣಂ (ಚಂದ್ರಿಕಾಖಂಡನಾಖಂಡನ) (ಶ್ರೀಕಾಶೀತಿಮ್ಮಣ್ಣಾಚಾರ್ಯರು)
೧೫. ಚಂದ್ರಿಕಾಭೂಷಣಂ (ಶ್ರೀಕೊಚ್ಚರಂಗಪ್ಪಾಚಾರ್ಯ)
೧೬. ಚಂದ್ರಿಕಾಪ್ರಕಾಶಪ್ರಸರಃ (ಶ್ರೀಗೌಡಗೆರಿ ವೆಂಕಟರಮಣಾಚಾರ್ಯ)
೧೭. ಅದ್ವೈತದೀಪಿಕಾವಾತಾಗಮಃ (ಶ್ರೀಗೌಡಗೆರಿ ವೆಂಕಟರಮಣಾಚಾರ್ಯ)

೧೮. ಚಂದ್ರಿಕಾಮಂಡನಂ (ಶ್ರೀಸತ್ಯಧ್ಯಾನತೀರ್ಥರು)
೧೯. ಸಭಾಪ್ರಸರ (ಶ್ರೀಅನಂತಾಚಾರ್ಯ ಗಲಗಲಿ)
೨೦. ಚಂದ್ರಿಕಾನ್ಯಾಯವಿವರಣಂ (ಶ್ರೀವರಖೇಡಿ ತಿಮ್ಮಣ್ಣಾಚಾರ್ಯ)
೨೧. ತತ್ವಪ್ರಕಾಶಿಕಾಟಿಪ್ಪಣಿ (ಬಿದರಹಳ್ಳಿ ಶ್ರೀನಿವಾಸತೀರ್ಥರು)
೨೨. ವ್ಯಾಕ್ಯಾರ್ಥಮಂಜರಿ (ಶರ್ಕರಾ ಶ್ರೀನಿವಾಸಾಚಾರ್ಯ)
೨೩. ತತ್ವಪ್ರಕಾಶಿಕಾಟಿಪ್ಪಣಿ (ಶ್ರೀ ವಿಜಯೀಂದ್ರತೀರ್ಥರು)
೨೪. ಗುರುರಾಜೀಯ (ಪಾಂಡುರಂಗಿ ಕೇಶವಾಚಾರ್ಯರು)
೨೫. ಅನಂತಭಟ್ಟೀಯ (ಶ್ರೀಮುಷ್ಣಂ ಅನಂತಾಚಾರ್ಯರು)
೨೬. ಕುಂಡಲಗಿರಿಯಾ (ಕುಂಡಲಗಿರಿಆಚಾರ್ಯರು)
೨೭. ಭಾವಪ್ರದೀಪಭಾಷ್ಯವ್ಯಾಖ್ಯಾನ (ಚಿಕ್ಕೋಡಿ ಭಗವಂತರಾಯರು)
೨೮. ಸುಬೋಧಚಂದ್ರಿಕಾ (ಆದ್ಯ ವರದಾಚಾರ್ಯರು)
೨೯. ನಯದರ್ಪಣ (ಶ್ರೀ ವಾದೀಂದ್ರ ತೀರ್ಥರು)
೩೦. ತತ್ವ ಸುಬೋಧಿನಿ (ಪಾಂಡುರಂಗಿ ಶ್ರೀನಿವಾಸಚಾರ್ಯರು)
೩೧. ಪ್ರಮೇಯಮುಕ್ತಾವಲಿ (ತಾಮ್ರಪರ್ಣಿ ಶ್ರೀನಿವಾಸಾಚಾರ್ಯರು)
೩೨. ತತ್ವಪ್ರಕಾಶಿಕಾ ಟಿಪ್ಪಣಿ (ಛಲಾರಿ ಸಂಕರ್ಷಣಾಚಾರ್ಯರು)
೩೩. ವ್ಯಾಕ್ಯಾರ್ಥಮುಕ್ತಾವಲಿ (ತಾಮ್ರಪರ್ಣಿ ಶ್ರೀನಿವಾಸಾಚಾರ್ಯರು)
೩೪. ತತ್ವಪ್ರಕಾಶಿಕಾಟೀಕಾಟಿಪ್ಪಣಿಸಾರೋದ್ಧಾರ (ಮಹಿಷಿ ವ್ಯಾಸರಾಯಾಚಾರ್ಯರು)
೩೫. ತತ್ವಪ್ರಕಾಶಿಕಾ ಸಾರ (ಶ್ರೀಧರಾಚಾರ್ಯ ಅಪಸಂಗಿ ನೀಲಂಗ)

ತತ್ವಪ್ರಕಾಶಿಕಾ ಗ್ರಂಥವು ಸುಮಾರು ೮೦೦೦ ಗ್ರಂಥಗಳಷ್ಟು ವಿಸ್ತಾರವಾಗಿದೆ. ಪ್ರಾಚೀನ ಹಾಗೂ ಅರ್ವಾಚೀನ ಟೀಕೆಗಳೆನ್ನಲ್ಲಾ ಮೀರಿಸಿದ ಮೇರು ಕೃತಿ ಇದು. ಈ ಗ್ರಂಥದ ಮೇಲೆ ಶ್ರೀವ್ಯಾಸತೀರ್ಥರು ತಾತ್ಪರ್ಯಚಂದ್ರಿಕಾ ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ರಾಯರು 'ಭಾವದೀಪ' ಎಂಬ ವ್ಯಾಖ್ಯಾನವನ್ನು ಬರೆದಿದ್ದಾರೆ. ಅವರೇ ಪುನಃ ತಾತ್ಪರ್ಯಚಂದ್ರಿಕಾ ಗ್ರಂಥಕ್ಕೂ 'ಪ್ರಕಾಶ'ವೆಂಬ ವ್ಯಾಖ್ಯಾನ ಬರೆದಿದ್ದಾರೆ. ಇದರಿಂದಲೇ ತತ್ವಪ್ರಕಾಶಿಕೆಯು ಎಷ್ಟು ಅಗಾಧವೆಂದು ಸ್ಪಷ್ಟವಾಗುತ್ತದೆ. ತತ್ವಪ್ರಕಾಶಿಕೆಯ ಮೇಲೆ ತಿಳಿಸಿದಂತೆ ಅನೇಕ ಟಿಪ್ಪಣಿಗಳು ಹೊರಟಿರುವುದಲ್ಲದೆ ಪರಮತೀಯರೂ ಸಹ ಕೆಲವೆಡೆ ಇದನ್ನು ನಿರಾಕರಿಸಿದ್ದಾರೆ. ಪರಮತೀಯರ ಆ ಜೊಳ್ಳುವಾದಗಳನ್ನೆಲ್ಲಾ ಚಂದ್ರಿಕಾಚಾರ್ಯರು ಮತ್ತು ಭಾವದೀಪಾಚಾರ್ಯರು ನಿರಾಕರಿಸಿದ್ದಾರೆ.

ಛಲಾರಿ ಆಚಾರ್ಯರು ತಮ್ಮ ''ಜಯತೀರ್ಥವಿಜಯ'' ಎಂಬ ಕಾವ್ಯದಲ್ಲಿ ನ್ಯಾಯಸುಧಾ-ಗ್ರಂಥವನ್ನು ಐರಾವತವೆಂದು ವರ್ಣಿಸಿ, ತತ್ವಪ್ರಕಾಶಿಕೆಯನ್ನು ಉಚ್ಚೈಶ್ರವಸ್ಸು ಎಂದು ಹೃದಯಂಗಮವಾಗಿ ವರ್ಣಿಸಿದ್ದಾರೆ. ಮತ್ತು ಶ್ರೀಜಯತೀರ್ಥರು ಮೊದಲ ಎರಡು ಅಧ್ಯಾಯಗಳಿಗೆ ಮಾತ್ರ ಟೀಕೆಯನ್ನು ಬರೆದಿರುವ ಶ್ರೀಮದಾಚಾರ್ಯರ ನ್ಯಾಯವಿವರಣ ಗ್ರಂಥದ ಮೂರು ಮತ್ತು ನಾಲ್ಕನೆಯ ಅಧ್ಯಾಯಗಳಿಗೆ ಶ್ರೀರಘೂತ್ತಮತೀರ್ಥರು ಟೀಕೆಯನ್ನು ಬರೆದಿದ್ದಾರೆ. ಕೊನೆಯಲ್ಲಿ ಅವರು ಮಾಡಿದ ಮಂಗಳಶ್ಲೋಕ ಹೀಗಿದೆ.

ತತ್ವಪ್ರಕಾಶಿಕಾಸಂಸ್ಥೋ ಮಯಾಽನುಗ್ರಹತೋ ಹರೇಃ ।
ಸನ್ನ್ಯಾಯವಿವೃತೇರ್ಭಾವೋ ಬಾಲಬೋಧಾರ್ಥಮುದ್ಧೃತಃ ॥

''ತತ್ವಪ್ರಕಾಶಿಕೆಯಲ್ಲಿರುವ ವಿಷಯವನ್ನೇ ನಾನು ನ್ಯಾಯವಿವರಣದ ಟೀಕೆಯಲ್ಲಿ ಹರಿಯ ಅನುಗ್ರಹದಿಂದ ಬರೆದಿದ್ದೇನೆ. ಇದರಿಂದ ಬಾಲಕರಿಗೆ ಅನುಕೂಲವಾಗುತ್ತದೆ''.

ಇವರ ಈ ಮಾತಿನಿಂದ ತತ್ವಪ್ರಕಾಶಿಕೆಯಲ್ಲಿ ಎಲ್ಲವೂ ಇದೆ ಎಂದು ತಿಳಿಯುತ್ತದೆ. ತತ್ವ-ಪ್ರಕಾಶಿಕೆಯು ಮೇಲ್ನೋಟಕ್ಕೆ ಸುಲಭವೆಂದು ತೋರಬಹುದು. ಆದರೆ ಇದರಲ್ಲಿರುವ ಗಾಂಭೀರ್ಯಅರ್ಥದ ವಿಸ್ತಾರ ಇವುಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಿಲ್ಲವೆಂದು ಜನ್ಮಾಧಿಕರಣದ ಪ್ರಾರಂಭದಲ್ಲಿ ರಾಯರೇ ಹೇಳಿದ್ದಾರೆ - ''ಶ್ರೀಮಜ್ಜಯತೀರ್ಥರು ಭಾಷ್ಯದ ಶೈಲಿಯಲ್ಲಿ ತತ್ವಪ್ರಕಾಶಿಕೆಯನ್ನು ರಚಿಸಿದ್ದಾರೆ. ಅನುವ್ಯಾಖ್ಯಾನದ ಶೈಲಿಯಲ್ಲಿ ನ್ಯಾಯಸುಧೆಯನ್ನು ರಚಿಸಿದ್ದಾರೆ''.

''ಬಾಲಸಂಘಮಪಿ ಬೋಧಯದ್ಭೃಶಂ ದುರ್ನಿರೂಪವಚನಂ ಚ ಪಂಡಿತೈಃ ।'' ಎಂಬ ಶ್ರೀಮದಾಚಾರ್ಯರ ಭಾಷ್ಯಸ್ವರೂಪವನ್ನು ವಿವರಿಸುವ ಪಂಡಿತಾಚಾರ್ಯರ ಮಾತಿನಂತೆ ತತ್ವಪ್ರಕಾಶಿಕೆಯು ಕೂಡ ಸುಲಭವಾಗಿ ತೋರಿದರೂ ಅಷ್ಟೇ ಗಹನಾರ್ಥಗಳಿಂದ ತುಂಬಿದೆ.

ಪ್ರತಿಯೊಂದು ಅಧಿಕರಣಗಳಲ್ಲಿಯೂ ವಿಷಯ, ಸಂಶಯ, ಪೂರ್ವಪಕ್ಷ ಹಾಗೂ ಸಿದ್ಧಾಂತಗಳನ್ನು ತೋರಿಸುತ್ತಾರೆ. ಇಂಥ ಶ್ರೇಷ್ಠವಾದ ತತ್ವಪ್ರಕಾಶಿಕಾ ಗ್ರಂಥವನ್ನು ಅಧ್ಯಯನ ಮಾಡಿ ಭಾಷ್ಯದ ನಿಜಾಭಿಪ್ರಾಯವನ್ನು ತಿಳಿದು ಧನ್ಯರಾಗೋಣ. ಪ್ರತಿಯೊಂದು ಅಧಿಕರಣಗಳಲ್ಲಿಯೂ ಇದನ್ನೇಕೆ ತೋರಿಸಬೇಕು? ಎಂಬ ಪ್ರಶ್ನೆಗೆ ಅಭಿನವಚಂದ್ರಿಕೆಯಲ್ಲಿ ಸುಂದರವಾಗಿ ಉತ್ತರಿಸಿದ್ದಾರೆ. ''ಬ್ರಹ್ಮಮಿಮಾಂಸಾಶಾಸ್ತ್ರದಲ್ಲಿರುವ ಪ್ರತಿಯೊಂದು ಅಧಿಕರಣಗಳೂ ಸಹ ಒಂದೊಂದು ಶಾಸ್ತ್ರದಂತಿವೆ. ಬೇರೆ ಬೇರೆ ಶಾಸ್ತ್ರಗಳಾದ್ದರಿಂದ ಎಲ್ಲಾ ಅಧಿಕರಣಗಳಲ್ಲಿಯೂ ಪ್ರತ್ಯೇಕವಾಗಿ ವಿಷಯಾದಿಪಂಚಕಗಳನ್ನು ತೋರಿಸಿದ್ದಾರೆ.

## ಭಾವದೀಪಕಾರರಾದ ಶ್ರೀರಾಘವೇಂದ್ರಗುರುಸಾರ್ವಭೌಮರು

ನಾಸ್ತಿಕಭೂಯಿಷ್ಠವಾದ ಈ ಘೋರ ಕಲಿಯುಗದಲ್ಲಿಯೂ ಹರಿಭಕ್ತಿ, ಗುರುಭಕ್ತಿ, ಸನಾತನಧರ್ಮ ಮೊದಲಾದ ಸದ್ಗುಣಗಳು ಅಖಂಡವಾಗಿ ಬೆಳಗುವಂತೆ ಮಾಡಿದ ಶ್ರೇಯಸ್ಸು ಶ್ರೀ ಮಂತ್ರಾಲಯ ಪ್ರಭುಗಳಿಗೆ ಸೇರುತ್ತದೆ. ಸಮಗ್ರ ದಕ್ಷಿಣ ಭಾರತದಲ್ಲಿ ಇವರ ಹೆಸರನ್ನು ಕೇಳದ ಆಸ್ತಿಕರಿಲ್ಲ. ಭಕ್ತರಿಗೆ ಕಾಮಿತಾರ್ಥಗಳನ್ನು ಈಡೇರಿಸುವ ಕಾಮಧೇನು ಆಗಿದ್ದಾರೆ. ಲಕ್ಷಾವಧಿ ಜನರ ಇಷ್ಟಾರ್ಥಗಳನ್ನು ಪೂರೈಸುವುದರಲ್ಲಿ ಕಲ್ಪವೃಕ್ಷವೂ ಆಗಿದ್ದಾರೆ. ಇವರ ವೃಂದಾವನದ ಪ್ರಭಾವದಿಂದ ತಿರುಪತಿ, ಉಡುಪಿ, ಪಂಢರಾಪುರ, ಕಾಶೀ, ಬದರಿಗಳಂತೆ ಮಂತ್ರಾಲಯವೂ ಕೂಡ ದಿವ್ಯಕ್ಷೇತ್ರವಾಗಿ ಪ್ರಸಿದ್ಧಿ ಪಡೆದಿದೆ.

ಜನರ ಕಷ್ಟ-ಕಾರ್ಪಣ್ಯಗಳನ್ನು ಪರಿಹರಿಸಿ ಇಷ್ಟಾರ್ಥಪ್ರಧಾನದಲ್ಲಿ ರಾಯರು ಅದ್ವಿತೀಯರಾಗಿದ್ದಾರೆ. ಆದರೆ ಲೌಕಿಕ ಫಲಗಳನ್ನು ನೀಡುವ ಮಾತ್ರದಿಂದ ಅವರಲ್ಲಿ ಮಹತ್ವಬುದ್ಧಿಯನ್ನು ತಾಳುವುದು ದೊಡ್ಡದಲ್ಲ. ಅಧ್ಯಾತ್ಮ ಪ್ರಪಂಚದಲ್ಲಿ ಅವರು ಅನುಗ್ರಹಿಸಿದ ವಿಚಾರವನ್ನು ತಿಳಿದು ಅವರ ಮಹಿಮೆಯನ್ನು ಅರಿಯಬೇಕು. ಅವರು ಬರೆದಿರುವ ಗ್ರಂಥಗಳು ಅಪಾರವಾಗಿವೆ. ಮತ್ತು ವ್ಯಾಕರಣ, ಮೀಮಾಂಸಾ, ನ್ಯಾಯ ಮೊದಲಾದ ಶಾಸ್ತ್ರಗಳ ನೈಪುಣ್ಯವನ್ನು ಎತ್ತಿತೋರಿಸಿವೆ. ಅವರಿಗಿರುವ ವೇದವೈದುಷ್ಯ ಅಸಾಧಾರಣವಾದದ್ದು. ಇವರು ಬರೆದಿರುವ ನ್ಯಾಯಸುಧೆಗೆ - ಪರಿಮಳ, ತಾತ್ಪರ್ಯಚಂದ್ರಿಕೆಗೆ - ಪ್ರಕಾಶ, ತತ್ವಪ್ರಕಾಶಿಕೆಗೆ - ಭಾವದೀಪ ಮೊದಲಾದ ಗ್ರಂಥಗಳನ್ನು ಕಂಡಾಗ ಇವರೊಬ್ಬರು ''ಸರ್ವಜ್ಞಕಲ್ಪರಾದ ಭೂಲೋಕದ ಕಲ್ಪವೃಕ್ಷ'' ಎಂಬ ಭಾವನೆ ಸಹಜವಾಗಿ ಹುಟ್ಟುತ್ತದೆ.

ಶ್ರೀಮದಾಚಾರ್ಯರ ಭಾಷ್ಯಕ್ಕೆ ಟೀಕೆಯಾದ ತತ್ವಪ್ರಕಾಶಿಕೆಗೆ ರಾಯರು ಬರೆದಿರುವ 'ಭಾವದೀಪ' ಬಲು ಅದ್ಭುತ. ಇವರು ತತ್ವಪ್ರಕಾಶಿಕೆಗೆ ಟಿಪ್ಪಣಿ ಬರೆದದ್ದಷ್ಟೇ ಅಲ್ಲದೇ, ತತ್ವಪ್ರಕಾಶಿಕೆಗೂ ಮೂಲವಾದ, ಮಧ್ವಭಾಷ್ಯಕ್ಕೂ ಮೂಲವಾದ, ಬ್ರಹ್ಮಸೂತ್ರಗಳಿಗೂ ನೇರವಾಗಿ ಟೀಕೆ ಬರೆದು 'ತಂತ್ರದೀಪಿಕಾ' ಎಂಬ ಹೆಸರಿಟ್ಟಿದ್ದಾರೆ. ಪುನಃ ತತ್ವಪ್ರಕಾಶಿಕೆಯ ವ್ಯಾಖ್ಯಾನವಾದ ಚಂದ್ರಿಕಾಗ್ರಂಥಕ್ಕೂ 'ಪ್ರಕಾಶ' ಎಂಬ ಟಿಪ್ಪಣಿಯನ್ನು ಬರೆದಿದ್ದಾರೆ.

ರಾಘವೇಂದ್ರಸ್ವಾಮಿಗಳ ೪೭ ಗ್ರಂಥಗಳು

೧. ತತ್ವಪ್ರಕಾಶಿಕಾ-ಭಾವದೀಪ

೨. ಶ್ರೀಮನ್ನ್ಯಾಯಸುಧಾ ಪರಿಮಳ

೩. ಚಂದ್ರಿಕಾ-ಪ್ರಕಾಶ

೪. ತರ್ಕತಾಂಡವವ್ಯಾಖ್ಯಾ

೫. ತಾತ್ಪರ್ಯನಿರ್ಣಯ ಭಾವಸಂಗ್ರಹ

೬. ಮಂತ್ರಾರ್ಥಮಂಜರೀ

೭. - ೧೬ ದಶೋಪನಿಷತ್ತುಗಳ ಖಂಡಾರ್ಥ

೧೭. ತಂತ್ರದೀಪಿಕಾ

೧೮. ನ್ಯಾಯಮುಕ್ತಾವಳಿ

೧೯. ಪ್ರಮೇಯದೀಪಿಕಾವ್ಯಾಖ್ಯಾ

೨೦. ಗೀತಾತಾತ್ಪರ್ಯಟೀಕಾವಿವರಣಮ್

೨೧. - ೨೩. ವೇದತ್ರಯವಿವೃತ್ತಿ

೨೪. - ೨೮. ಪುರುಷಸೂಕ್ತಾದಿಪಂಚಸೂಕ್ತವ್ಯಾಖ್ಯಾ

೨೯. ತತ್ವಮಂಜರೀ

೩೦. ವಾದವಳೀವ್ಯಾಖ್ಯಾ

೩೧. - ೪೦. ದಶಪ್ರಕರಣವ್ಯಾಖ್ಯಾ

೪೧. ರಾಮಚಾರಿತ್ರ್ಯಮಂಜರೀ

೪೨. ಕೃಷ್ಣಚಾರಿತ್ರ್ಯಮಂಜರೀ

೪೩. ಪ್ರಮಾಣಪ್ರದ್ಧತಿವ್ಯಾಖ್ಯಾ

೪೪. ಅಣುಮಧ್ವವಿಜಯವ್ಯಾಖ್ಯಾ

೪೫. ಪ್ರಾತಃಸಂಕಲ್ಪಗದ್ಯ

೪೬. ಭಾಟ್ಟಸಂಗ್ರಹ.

೪೭. ಗೀತಾರ್ಥ ಸಂಗ್ರಹ

ಪ್ರಕೃತ ರಾಯರ ಭಾವದೀಪದ ವೈಶಿಷ್ಟ್ಯವನ್ನು ಅರಿಯೋಣ. ಭಾವದೀಪದಲ್ಲಿ ಎಲ್ಲೆಡೆಯೂ ಸ್ವಾರಸ್ಯವೇ ತುಂಬಿದೆ. ಕೆಲವೊಂದಷ್ಟೇ ಈಗ ಉದಾಹರಿಸಬಹುದು -

೧. ಟೀಕೆಯಲ್ಲಿ ಹೇಳಲ್ಪಟ್ಟ ವಿಷಯವು ಭಾಷ್ಯಕಾರರಿಗೆ ಸಮ್ಮತವಾಗಿದೆಯೋ ಇಲ್ಲವೋ ಎಂಬ ಕುತೂಹಲ ಸಹಜವಾಗಿ ಬರುತ್ತದೆ. ಈ ಕುತೂಹಲಕ್ಕೆ ಭಾವದೀಪದಲ್ಲಿ ರಾಯರು ಹೇಗೆ ಉತ್ತರಿಸಿದ್ದಾರೆಂದು ನೋಡೋಣ - ''ಅಥಾತೋ ಬ್ರಹ್ಮಜಿಜ್ಞಾಸಾ'' ಎಂಬ ಸೂತ್ರದಲ್ಲಿ ಟೀಕೆಯಲ್ಲಿ ಮಾಡಿದ ಪೂರ್ವಪಕ್ಷವು ಭಾಷ್ಯದಿಂದ ಲಭ್ಯವಾದಂತೆ ತೋರುವುದಿಲ್ಲ. ಏಕೆಂದರೆ ಟೀಕೆಯ ಪೂರ್ವಪಕ್ಷದ ಸಿದ್ಧಾಂತವು ಹೀಗಿವೆ. 'ಬ್ರಹ್ಮನು ಜೀವನಿಂದ ಅಭಿನ್ನನಾಗಿದ್ದಾನೆ. ನಾನು ಎಂಬ ಅನುಭವದಿಂದ ಜೀವನು ನಿತ್ಯಸಿದ್ಧನಾಗಿದ್ದಾನೆ. ಜೀವನಿಂದ ಅಭಿನ್ನನಾದ ಬ್ರಹ್ಮನು ನಿರ್ವಿಶೇಷನಾದ್ದರಿಂದ ನಾನು ಎಂಬ ಜ್ಞಾನಕ್ಕಿಂತ ಹೆಚ್ಚಿನ ಅಂಶವನ್ನು ಬ್ರಹ್ಮನ ವಿಷಯದಲ್ಲಿ ವೇದಾಂತಗಳು ಹೇಳಲಾರವು. ಆದ್ದರಿಂದ ಸಂದಿಗ್ಧನಲ್ಲದ ಬ್ರಹ್ಮನು ವಿಷಯನಾಗಲಾರ. ಆದ್ದರಿಂದ ಬ್ರಹ್ಮಜಿಜ್ಞಾಸೆಯೂ ಕೂಡುವುದಿಲ್ಲವೆಂದು ಪೂರ್ವಪಕ್ಷ.

''ತದ್ವಿವಿಜಿಜ್ಞಾಸಸ್ವ'' ಎಂಬಲ್ಲಿ ಜಿಜ್ಞಾಸೆಗೆ ವಿಷಯನಾದವನು ಬ್ರಹ್ಮ. ಆದರೂ 'ಅಥ ಕಸ್ಮಾತ್ ಉಚ್ಯತೇ ಬ್ರಹ್ಮೇತಿ । ಬೃಹಂತೋ ಹ್ಯಸ್ಮಿನ್ ಗುಣಾಃ'' ಎಂಬ ಶ್ರುತಿಯ ಆಧಾರದಿಂದ ಬ್ರಹ್ಮನು ಗುಣಪೂರ್ಣನಾಗಿದ್ದಾನೆಂದು ಸಿದ್ಧನಾಗಿದ್ದಾನೆ. ಆದರೆ ಜೀವನು ಅಲ್ಪಗುಣನೆಂದೂ ಅನುಭವದಿಂದ ಸಿದ್ಧನಾಗಿದ್ದಾನೆ. ಇಂತಹ ಜೀವನಿಗಿಂತ ಬ್ರಹ್ಮನು ಭಿನ್ನನಾದ್ದರಿಂದ ಅಸಂದಿಗ್ಧನಾಗಿದ್ದಾನೆ. ಆದ್ದರಿಂದಲೇ ವೇದಾಂತಗ್ರಂಥಗಳಿಗೆ ವಿಷಯನೂ ಆಗುತ್ತಾನೆ. ಬ್ರಹ್ಮಜಿಜ್ಞಾಸೆಯು ಕರ್ತವ್ಯವೂ ಆಗಿದೆಯೆಂದು ಸಿದ್ಧಾಂತ.

ಆದರೆ ಭಾಷ್ಯಕಾರರು ಸೂತ್ರದಲ್ಲಿರುವ ಬ್ರಹ್ಮಪದಕ್ಕೆ ಬ್ರಹ್ಮಶಬ್ದಶ್ಚ ವಿಷ್ಣಾವೇವ ಎಂದು ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿ ರೂಢ್ಯರ್ಥವನ್ನು ಹೇಳಿದ್ದಾರೆ. ಆದ್ದರಿಂದ ಟೀಕೆಯಲ್ಲಿ ಹೇಳಿದ ಗುಣಪೂರ್ಣತ್ವವೆಂಬ ಯೌಗಿಕಾರ್ಥವು ಹೇಗೆ ಭಾಷ್ಯಾರೂಢವಾಗುತ್ತದೆ ? ಎಂದೇ ತಿಳಿಯುವುದಿಲ್ಲ. ಈ ಸಂದರ್ಭದಲ್ಲಿ ಭಾವದೀಪಕಾರರು ಗೊಂದಲ ಪರಿಹರಿಸಿದ್ದಾರೆ - ಭಾಷ್ಯದಲ್ಲಿರುವ ಅತಃ ಎಂಬ ಪದವನ್ನು ಆವೃತ್ತಿ ಮಾಡಿ ಯೋಜನೆ ಮಾಡಿದಾಗ ಟೀಕೆಯಲ್ಲಿ ಈ ರೀತಿಯ ಪೂರ್ವಪಕ್ಷ ಸಿದ್ಧಾಂತಗಳನ್ನು ಮಾಡಿದ್ದಾರೆಂದು ತಿಳಿಸಿದ್ದಾರೆ. ಇಷ್ಟರಿಂದಲೇ ಎಲ್ಲ ಗೊಂದಲಗಳು ಪರಿಹಾರವಾಗುತ್ತವೆ.

೨. ಸೂತ್ರಲಕ್ಷಣದಲ್ಲಿ ಎಲ್ಲಾ ವಿಶೇಷಣಗಳು ಸಾರ್ಥಕವೆನ್ನಲು ತತ್ವಪ್ರದೀಪವನ್ನು ಉದಾಹರಿಸುತ್ತಾರೆ.

ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋಮುಖಮ್ ।
ಅಸ್ತೋಭಮನವದ್ಯಂ ಚ ಸೂತ್ರಂ ಸೂತ್ರವಿದೋ ವಿದುಃ ॥

ಒಟ್ಟು ಸೂತ್ರಕ್ಕೆ ಆರು ವಿಶೇಷಣಗಳು. ಅಲ್ಪಾಕ್ಷರತ್ವವನ್ನು ಹೇಳದಿದ್ದರೆ ಭಾಷ್ಯದಲ್ಲಿ ಅತಿವ್ಯಾಪ್ತಿ. ಅಸಂದಿಗ್ಧತ್ವವನ್ನು ಹೇಳದಿದ್ದರೆ ನಿರ್ಣಾಯಕವಲ್ಲದ ವಾಕ್ಯದಲ್ಲಿ ಅತಿವ್ಯಾಪ್ತಿ. ಸಾರವತ್ವವನ್ನು ಹೇಳದಿದ್ದರೆ ಚತುರನಾದ ಪುರುಷನಿಂದ ಹೇಳಲ್ಪಟ್ಟ ಲೋಕವಾರ್ತಾದಿವಾಕ್ಯದಲ್ಲಿ ಅತಿವ್ಯಾಪ್ತಿ. ವಿಶ್ವತೋಮುಖತ್ವವನ್ನು ಹೇಳದಿದ್ದರೆ ನಾರಾಯಣ ಮೊದಲಾದ ಭಗವನ್ನಾಮಾದಿಗಳಲ್ಲಿ ಅತಿವ್ಯಾಪ್ತಿ. ಅಸ್ತೋಭತ್ವವನ್ನು ಹೇಳದಿದ್ದರೆ ವ್ಯರ್ಥಾಕ್ಷರಗಳಿಂದ ಕೂಡಿದ ವಾಕ್ಯದಲ್ಲಿ ಅತಿವ್ಯಾಪ್ತಿ. ಅನವದ್ಯತ್ವವನ್ನು ಹೇಳದಿದ್ದರೆ ಅಪಶಬ್ದದಿಂದ ಕೂಡಿದ ವಾಕ್ಯದಲ್ಲಿ ಅತಿವ್ಯಾಪ್ತಿ ಬರುತ್ತದೆ. ಇವುಗಳನ್ನು ಪರಿಹರಿಸಲು ಆರು ವಿಶೇಷಣಗಳನ್ನು ಸೂತ್ರದಲ್ಲಿ ಹೇಳಬೇಕು. ಈ ವಿಚಾರವು ತತ್ವಪ್ರದೀಪದಲ್ಲಿ ಹೇಳಲ್ಪಟ್ಟಿದೆ.

ಹೀಗೆ ಭಾವದೀಪಕಾರರು ಅಲ್ಲಲ್ಲಿ ತತ್ವಪ್ರದೀಪದಲ್ಲಿರುವ ವೈಶಿಷ್ಟ್ಯವನ್ನು ಎತ್ತಿತೋರಿಸಿದ್ದಾರೆ.

೩. 'ಬ್ರಹ್ಮರುದ್ರಾದಿದೇವೇಷು ಜ್ಞಾನಂ ಸಂಸ್ಥಾಪ್ಯ' ಎಂಬ ಟೀಕೆಗೆ ಭಾವದೀಪದಲ್ಲಿ ಮಾಡಿದ ವ್ಯಾಖ್ಯಾನ ಬಲು ಮಾರ್ಮಿಕವಾಗಿದೆ -

ಬ್ರಹ್ಮಾದಿಗಳಲ್ಲಿರುವ ಜ್ಞಾನವು ತಿರೋಹಿತವೇ ಆಗಿಲ್ಲ. ಹೀಗಿರುವಾಗ ಬ್ರಹ್ಮಾದಿಗಳಲ್ಲಿಯೂ. ಜ್ಞಾನದ ಸ್ಥಾಪನೆ ಏಕೆ? ಎಂಬ ಪ್ರಶ್ನೆ ಬಂದರೆ, ಬ್ರಹ್ಮಾದಿಗಳಿಗೆ ಮೊದಲೇ ಯಥಾರ್ಥಜ್ಞಾನವಿತ್ತು. ಅದನ್ನು ಮತ್ತಷ್ಟು ದೃಢಗೊಳಿಸಿದ ಎಂದರ್ಥ.

ಇಲ್ಲಿ ಕೆಲವರು ಹೀಗೆ ಹೇಳುತ್ತಾರೆ - ಬ್ರಹ್ಮದೇವರ ಜ್ಞಾನವನ್ನಷ್ಟೇ ದೃಢಗೊಳಿಸಿದ. ರುದ್ರಾದಿಗಳಿಗೆಲ್ಲ ಮೊದಲಿಲ್ಲದ ಹೊಸ ಜ್ಞಾನವನ್ನೇ ನೀಡಿದ ಎಂದು. ಆದರೆ ವಸ್ತುತಃ ಬ್ರಹ್ಮದೇವರಿಗೂ ಅಪ್ರಾಪ್ತಜ್ಞಾನವನ್ನು ನೀಡಿದನೆಂದು ಹೇಳಬಹುದು. ಏಕೆಂದರೆ 'ಬ್ರಹ್ಮಾದೀನಾಮಪ್ಯಪ್ರಾಪ್ತಜ್ಞಾನಮುತ್ಪದ್ಯತೇ' 'ಬ್ರಹ್ಮಾದಿಗಳಿಗೂ ಅಪ್ರಾಪ್ತಜ್ಞಾನ ಹುಟ್ಟುತ್ತದೆ'ಂದು ಈಶಾವಾಸ್ಯೋಪನಿಷತ್ತಿನ ಭಾಷ್ಯ-ಟೀಕೆಯಲ್ಲಿ ಹೇಳಿದ್ದಾರೆ. ಭಗವಂತನ ವಿಷಯದಲ್ಲಿ ಹೊಸಹೊಸಜ್ಞಾನವನ್ನು ಬ್ರಹ್ಮದೇವರು ನಿರಂತರವಾಗಿ ಪಡೆಯುತ್ತಲೇ ಇರುತ್ತಾರೆ.

ಪ್ರಶ್ನೆ - 'ಏವಂ ಜ್ಞಾನಂ ಪುನಃ ಪ್ರಾಪುರ್ದೇವಾಶ್ಚ ಋಷಯಸ್ತಥಾ' ಎಂದು ಮಹಾಭಾರತತಾತ್ಪರ್ಯನಿರ್ಣಯದಲ್ಲಿ ಪುನಃಪದವನ್ನು ಹೇಳಿದ್ದರಿಂದ ದೇವತೆಗಳಿಗೂ ತಿರೋಹಿತವಾದ ಜ್ಞಾನವು ಲಭಿಸಿತ್ತೆಂದು ತಿಳಿಯುತ್ತದೆ. ಆದ್ದರಿಂದ ಬ್ರಹ್ಮದೇವರಿಗೂ ಸಹ ತಿರೋಹಿತಜ್ಞಾನದ ಪ್ರಾಪ್ತಿಯನ್ನು ಹೇಳಬೇಕಲ್ಲವೇ?

ಉತ್ತರ - 'ಏವಂ ಜ್ಞಾನಂ ಪುನಃ' ಎಂಬ ಮಾತಿಗೆ ಬ್ರಹ್ಮದೇವರ ವಿಷಯದಲ್ಲಿ ಮೊದಲೇ ಇರುವ ಜ್ಞಾನದಲ್ಲಿ ವಿಶೇಷದಾರ್ಢ್ಯ ತಂದುಕೊಟ್ಟರೆಂದು ಅರ್ಥೈಸಬೇಕು. ಉಳಿದ ದೇವತೆಗಳ ವಿಷಯದಲ್ಲಿ ತಿರೋಹಿತವಾದ ಜ್ಞಾನದ ಪ್ರಾಪ್ತಿಯಾಯಿತೆಂದು ಅರ್ಥೈಸಬೇಕು. ಏಕೆಂದರೆ ಆಚಾರ್ಯರು ಗೀತಾತಾತ್ಪರ್ಯದಲ್ಲಿ ಬ್ರಹ್ಮದೇವರನ್ನು ಬಿಟ್ಟು ಉಳಿದ ದೇವತೆಗಳಿಗಷ್ಟೇ ತಿರೋಹಿತ ಜ್ಞಾನದ ಪ್ರಾಪ್ತಿಯನ್ನು ಹೇಳಿದ್ದಾರೆ.

'ಉಪಾಸ್ಯೈವ ತು ಪಶ್ಯಂತಿ ನಾನ್ಯಥಾ ತು ಕಥಂಚನ ।
ಋಷೀನ್ ರಾಜ್ಞಸ್ತಥಾರಭ್ಯ ಪ್ರತಿಭಾಽಭ್ಯಧಿಕಾಃ ಕ್ರಮಾತ್ ।
ಯಾವದ್ ಬ್ರಹ್ಮಾ ಬ್ರಹ್ಮಣಸ್ತು ಪ್ರಾಯೋ ನಾಪ್ರತಿಭಾಸಿತಮ್॥''

ಗೀತಾತಾತ್ಪರ್ಯದಲ್ಲಿ ಉದಾಹರಿಸಿದ ಇದೇ ಶ್ಲೋಕದಲ್ಲಿ 'ಪ್ರಾಯಃ' ಎಂಬ ಶಬ್ದವಿದೆ. ಇದರಿಂದ ಬ್ರಹ್ಮದೇವರಿಗೂ ಸಹ ಕೆಲವೊಮ್ಮೆ ಜ್ಞಾನದ ತಿರೋಧಾನವಿದೆಯೆಂದು ತಿಳಿಯುತ್ತದೆ. ಮತ್ತು ಭಾಗವತ ದ್ವಿತೀಯಸ್ಕಂಧದಲ್ಲಿ 'ಏವಂ ಪುರಾ ಧಾರಣಯಾತ್ಮಯೋನಿಃ ನಷ್ಟಾಂ ಸ್ಮೃತಿಂ ಪ್ರತ್ಯವರುಹ್ಯ ತುಷ್ಟನ್' ಎಂದು ನಷ್ಟವಾದ ಸ್ಮೃತಿಯನ್ನು ಹೊಂದಿದರೆಂದು ಹೇಳಲಾಗಿದೆ. ಮತ್ತು 'ಅಪಾಶ್ರಿತಃ ಕಂಜಮು ಲೋಕತಂತ್ರಂ ನಾತ್ಮಾನಮದ್ಧಾವಿಧದಾದಿದೇವಃ' ಎಂದು ತೃತೀಯಸ್ಕಂಧದಲ್ಲಿ ಪರಮಾತ್ಮನನ್ನು ತಿಳಿಯಲಿಲ್ಲವೆಂದು ಅಜ್ಞಾನವನ್ನು ಹೇಳಿದ್ದಾರೆ. ಇದರಿಂದ ಬ್ರಹ್ಮದೇವರಿಗೂ ಜ್ಞಾನದ ತಿರೋಧಾನವಿದೆಯೆಂದು ತಿಳಿಯುವಾಗ ಬ್ರಹ್ಮದೇವರನ್ನು ಬಿಟ್ಟು ಉಳಿದ ದೇವತೆಗಳಲ್ಲಷ್ಟೇ ಜ್ಞಾನದ ತಿರೋಧಾನವೆಂದು ಹೇಗೆ ಹೇಳಿದಿರಿ.

ಉತ್ತರ - ಬ್ರಹ್ಮದೇವರಿಗೆ ಯಾವುದೇ ಕಾಲದಲ್ಲಿಯೂ ಜ್ಞಾನದ ತಿರೋಧಾನವಿಲ್ಲ. ಏಕೆಂದರೆ 'ಸೂರ್ಯಕ್ಷೋಽಭವತ್ ಕ್ಷೋಭಮಾತ್ರಕಂ ನೈವಾಜ್ಞಾನಂ ಯಥಾ ಸೂರ್ಯೇ ತಮೋ ನಾಸ್ತಿ ಕಥಂಚನ' ಎಂದು ಏಕಾದಶತಾತ್ಪರ್ಯದಲ್ಲಿ ಹೇಳಿದಂತೆ ಮಧ್ಯಾಹ್ನಕಾಲದ ಸೂರ್ಯನಲ್ಲಿ ಅಲ್ಪವಾದ ಚಲನೆಯಿದ್ದರೂ ತಮಸ್ಸು ಬರಲು ಹೇಗೆ ಸಾಧ್ಯವೇ ಇಲ್ಲವೋ ಅದರಂತೆ ಬ್ರಹ್ಮದೇವರಿಗೆ ಅಲ್ಪವಿಧವಾದ ಕ್ಷೋಭೆಯಿದ್ದರೂ ಅಜ್ಞಾನ ಬರಲು ಸಾಧ್ಯವೇ ಇಲ್ಲ. ಆ ಕ್ಷೋಭೆಯಾದರೂ ಸಹ ಕೇವಲ ವಿಷ್ಣುಪ್ರೀತಿಗಾಗಿ. ಅಂದರೆ ವಸ್ತುತಃ ಬ್ರಹ್ಮದೇವರಿಗೆ ಅಜ್ಞಾನವಿಲ್ಲ. ಆದರೆ ಕೆಲವು ಕ್ಷಣಗಳ ಕಾಲ ಅಜ್ಞಾನವಿರುವಂತೆ ನಟನೆ ಮಾಡುತ್ತಾರೆ. ಈ ನಟನೆಯು ವಿಷ್ಣುಪ್ರೀತಿಗಾಗಷ್ಟೇ ಹೊರತು ಅಸಾಮರ್ಥ್ಯದಿಂದಲ್ಲ.

''ಅಜ್ಞಾನಂ ಚ ಚತುರ್ವಾರಂ ದ್ವಿವಾರಂ ಭಯಮೇವ ಚ ।
ಶೋಕೋಽಪಿ ತಾವನ್ನಾನ್ಯತ್ರ ಕದಾಚಿತ್ ಬ್ರಹ್ಮಣೋ ಭವೇತ್ ॥''

ಕೆಲವು ಕ್ಷಣದಲ್ಲಷ್ಟೇ ಇರುವ ಅಜ್ಞಾನ ಭಯ ಶೋಕ ಮೊದಲಾದವುಗಳು ಭಗವತ್ಪ್ರೀತಿಯ ಔನ್ನತ್ಯಕ್ಕಾಗಿ ಎಂದು ಷಷ್ಠಸ್ಕಂಧದ ತಾತ್ಪರ್ಯದಲ್ಲಿ ನಿರ್ಣಯಿಸಿದ್ದಾರೆ. (ಅಜ್ಞಾನಾದಿಗಳಿಗೆ ಅಭಿಮಾನಿ ದೇವತೆ ದುರ್ಗಾರೂಪಿಯಾದ ಲಕ್ಷ್ಮಿ. ಅವಳಿಗೂ ಗೌರವ ನೀಡುವುದಕ್ಕಾಗಿ ಅಜ್ಞಾನಾದಿಗಳನ್ನು ಕೆಲವು ಕ್ಷಣಗಳ ಕಾಲ ತಮ್ಮಲ್ಲಿರುವಂತೆ ನಟಿಸುತ್ತಾರೆ.) ಶ್ರವಣಾದಿಗಳನ್ನೂ ಸಹ ವಿಷ್ಣುಪ್ರೀತಿಗಾಗಿಯೇ ನಡೆಸುತ್ತಾರೆ. 'ವಿಷ್ಣುಪ್ರೀತ್ಯರ್ಥಮೇವಾಸ್ಯ ಶ್ರೋತವ್ಯಂ ಪ್ರಾಯಶೋ ಭವೇತ್' (ಗೀತಾತಾತ್ಪರ್ಯ).

ವಸ್ತುತಃ ಬ್ರಹ್ಮದೇವರನ್ನು ಬಿಟ್ಟು ಉಳಿದದೇವತೆಗಳಿಗೂ ಹಿಂದೆ ಹೇಳಿದ ಪ್ರಕಾರ ಜ್ಞಾನತಿರೋಧಾನವನ್ನು ಹೇಳಲಾಗದು. ಗೌತಮರ ಶಾಪವಾಗಲೀ ಕಾಲಪ್ರಭಾವ- ವಾಗಲೀ ದೇವಲೋಕದಲ್ಲಿ ಬರಲು ಸಾಧ್ಯವಿಲ್ಲ. ಆದರೆ ಬ್ರಹ್ಮವರದಿಂದ ದೃಪ್ತರಾದ ಕಲಿ ಮೊದಲಾದ ದೈತ್ಯರ ಆವೇಶದಿಂದ ಜ್ಞಾನವು ತಿರೋಧಾನವಾಗಬಹುದು. ದೈತ್ಯಾವೇಶವು ಹೋದಾಗ ಪುನಃ ಜ್ಞಾನದ ಪ್ರಾಪ್ತಿಯಾಗಬಹುದು. ಇದನ್ನೇ ತಾತ್ಪರ್ಯನಿರ್ಣಯದಲ್ಲಿ ಆಚಾರ್ಯರು ಹೇಳಿದ್ದಾರೆ.

''ಕಲಿಸ್ತ್ವಯಂ ಬ್ರಹ್ಮವರಾದಿದಾನೀಂ ನಿಬಾಧತೇಽಸ್ಮಾನ್ ಸಕಲಾ ಪ್ರಜಾಶ್ಚ।
ಅಜ್ಞಾನಮಿಥ್ಯಾಮತಿರೂಪತೋಧಿಸೌ ಪ್ರವಿಶ್ಯ ಸಜ್ಜ್ಞಾನವಿರುದ್ಧರೂಪಃ ॥' (೧೦/೩೬)

(ಯಥಾರ್ಥಜ್ಞಾನಕ್ಕೆ ವಿರುದ್ಧರೂಪನಾದ ಕಲಿಯು ಬ್ರಹ್ಮವರದಿಂದ ದೃಪ್ತನಾಗಿ ಅಜ್ಞಾನ ಹಾಗೂ ಮಿಥ್ಯಾಜ್ಞಾನಗಳಿಂದ ನಮ್ಮೆಲ್ಲ ಪ್ರಜೆಗಳನ್ನು ಈಗ ಪ್ರವೇಶಮಾಡಿ ಪೀಡಿಸುತ್ತಿದ್ದಾನೆ.

''ಅಸೌ ಗಿರೀಶಾದಿಮನೋನುಶಾಯೀ ಕಲಿರ್ಮಮಾರಾಶು ಸುವಾಙ್ಮಯೈಃ ಶರೈಃ॥
ನಿಕೃಂತಶೀರ್ಷೋ ಭಗವನ್ಮುಖೇರಿತೈಃ ಸುರಾಶ್ಚ ಸಜ್ಜ್ಞಾನಸುಧಾರಸಂ ಪಪುಃ'' (೧೦/೬೦)

(ರುದ್ರಾದಿಗಳ ಮನಸ್ಸಿನಲ್ಲಿ ಕಲಿಯು ಮನೆಮಾಡಿದ್ದ. ಭಗವಂತನ ಮುಖದಿಂದ ಹೊರಹೊಮ್ಮಿದ ವಾಙ್ಮಯಬಾಣಗಳಿಂದ ಇವನ ತಲೆಯು ಛಿನ್ನವಾಗಿ ಮರಣಹೊಂದಿದ. ಆವಾಗ ದೇವತೆಗಳು ಒಳ್ಳೆಯ ಜ್ಞಾನಾಮೃತರಸವನ್ನು ಪಾನಮಾಡಿದರು.) ಈ ಪ್ರಮಾಣದ ಆಧಾರದಿಂದ ದೇವತೆಗಳಿಗೆ ಜ್ಞಾನದ ತಿರೋಧಾನವು ಕಲ್ಯಾವೇಶದಿಂದ ಉಂಟಾಗಬಹುದೆಂದು ತಿಳಿಯುತ್ತದೆ. ಇದಕ್ಕನುಸಾರಿಯಾಗಿಯೇ ಹಿಂದಿನ ಮಾತುಗಳನ್ನು ವ್ಯಾಖ್ಯಾನಿಸಬೇಕು. ದ್ವಾಪರಕಾಲದ ಪ್ರಭಾವ ಹಾಗೂ ಗೌತಮರ ಶಾಪದ ಪ್ರಭಾವವು ಭೂಲೋಕದಲ್ಲಿರುವ ಸಜ್ಜನರ ವಿಷಯದಲ್ಲಷ್ಟೇ ಎಂದು ಭಾವಿಸಬೇಕು.

೪. ಟೀಕೆಯಲ್ಲಿ ಪಾಠಶೋಧನೆಯ ಬಗ್ಗೆಯೂ ರಾಯರು ಅನೇಕ ಕಡೆ ಗಮನಹರಿಸಿದ್ದಾರೆ. ಜನ್ಮಾಧಿಕರಣದಲ್ಲಿ ಒಂದು ಪ್ರಸಂಗ ಹೀಗಿದೆ -

ಇಲ್ಲಿ ಕೆಲವೊಂದು ಕೋಶದಲ್ಲಿ 'ಜಾತ್ಯಾದೇಃ ಮುಖ್ಯತಃ ಅಜಿಜ್ಞಾಸ್ಯತ್ವಾತ್ ದೇಹಾತ್ಮ-ವಿವೇಕಸ್ಯಾವಶ್ಯಕತ್ವಾತ್' ಎಂಬ ವಾಕ್ಯವು ಟೀಕಾಪಾಠವಾಗಿ ಬಂದಿದೆ. ಇದು ಇಲ್ಲಿಗೆ ಸಂಬಂಧಪಟ್ಟ ವಾಕ್ಯವಲ್ಲ. 'ತಸ್ಯ ಚ' ಇತ್ಯಾದಿ ಉತ್ತರವಾಕ್ಯಕ್ಕೆ ಇದು ಹೊಂದಾಣಿಕೆ-ಯಾಗುವುದಿಲ್ಲ. ಹಾಗೆಯೇ ಚಂದ್ರಿಕಾವಾಕ್ಯಕ್ಕೂ ಕೂಡ ಹೊಂದಾಣಿಕೆಯಾಗುವುದಿಲ್ಲ. ಆದ್ದರಿಂದ ನ್ಯಾಯವಿವರಣಟೀಕಾದಿ ಗ್ರಂಥಗಳಲ್ಲಿ ಇರುವ ಈ ವಾಕ್ಯವನ್ನು ಕೆಲವರು ಇಲ್ಲಿ ಸೇರಿಸಿದ್ದಾರೆ. ಹೆಚ್ಚಿನ ಕೋಶಗಳಲ್ಲಿ ಈ ವಾಕ್ಯವು ಇರುವುದಿಲ್ಲ ಎಂಬುದಾಗಿ ಜ್ಞಾನಿಗಳು ಹೇಳುತ್ತಿದ್ದಾರೆ.

ಹೀಗೆ ಗುರುಸಾರ್ವಭೌಮರು ಭಾವದೀಪದಲ್ಲಿ ಅಪೂರ್ವವಿಷಯಗಳನ್ನು ಹೆಜ್ಜೆ-ಹೆಜ್ಜೆಗೂ ತಿಳಿಸಿದ್ದಾರೆ. ತತ್ವಪ್ರಕಾಶಿಕೆಯನ್ನು ಪರಿಪೂರ್ಣವಾಗಿ ಅರ್ಥಮಾಡಿಸಿದ್ದಾರೆ. ಮತ್ತು ಅರ್ಥವಾಗದ ಸಂದರ್ಭದಲ್ಲಿ ಸುಲಲಿತವಾಗಿ ಅರ್ಥವಾಗುವಂತೆ ವ್ಯಾಖ್ಯಾನ ಮಾಡಿದ್ದಾರೆ. ಇಂಥ ಕಾಮಧೇನುಗಳಿಗೆ ಅನಂತ ನಮನಗಳು.

## *ಈ ಪುಸ್ತಕದ ಬಗ್ಗೆ*

ಈ ಪುಸ್ತಕದಲ್ಲಿ ಕಸ್ತೂರಿ ಕನ್ನಡದಲ್ಲಿ ಭಾವದೀಪದ ಅನುವಾದ ಮಾಡಲಾಗಿದೆ. ಆದರೆ, ಭಾವದೀಪದ ಅನುವಾದ ಪರಿಪೂರ್ಣಚಂದ್ರಿಕೆಯಲ್ಲಿಯೇ ಇದೆ. ಪುನಃ ಈ ಪುಸ್ತಕವೇಕೆ....?

ಹೌದು! ಆದರೆ ಈಗೊಮ್ಮೆ ಪರಿಪೂರ್ಣಚಂದ್ರಿಕಾ ಪುಸ್ತಕವನ್ನು ಹಿಡಿದು ತುಲನೆಮಾಡಿ ನೋಡಿ.....

ಹೌದು... ಎಲ್ಲೆಡೆ ವ್ಯತ್ಯಾಸವಿದೆ.... ಹೀಗೇಕೆ ವ್ಯತ್ಯಾಸ....?

ವ್ಯತ್ಯಾಸಕ್ಕೆ ಕಾರಣವಿದೆ.... ಅಲ್ಲಿ ತಾತ್ಪರ್ಯ ಚಂದ್ರಿಕೆ ಹಾಗೂ ಪ್ರಕಾಶ ಟಿಪ್ಪಣಿಗಳಿಗೆ ಹೆಚ್ಚು ಮಹತ್ವ. ಅವುಗಳ ಅಧ್ಯಯನಕ್ಕೆ ಅನುಕೂಲವಾಗಲು ಭಾವದೀಪ ಸೇರಿಕೊಂಡಿದೆ. ಭಾವದೀಪದ ಪಂಕ್ತಿಗಳ ಅನುವಾದ ಅಲ್ಲಿ ಸಿಗದು. ಕೆಲವೊಮ್ಮೆ ಸಿಗುವುದಾದರೂ ಸಾರಾತ್ಮಕವಾದ ಅನುವಾದವೇ ಜಾಸ್ತಿ. ಇಲ್ಲಿ ಪ್ರತಿಯೊಂದು ಪಂಕ್ತಿಗಳಿಗೂ ಅನುವಾದವಿದೆ.

ಪ್ರತಿಯೊಂದು ವಿಷಯಗಳಿಗೂ ''ಶಿರೋನಾಮ'' ರಾರಾಜಿಸುತ್ತಿದೆ.... ವಿವರಣೆ ಇದೆ.... ಒಟ್ಟು ಸಾರಾಂಶವಿದೆ.... ವಿಶೇಷ ವಿಚಾರವಿದೆ .... ವಿಶ್ಲೇಷಣೆ ಇದೆ .... ಇನ್ನೂ ಹೆಚ್ಚು ವಿಚಾರ ಮಾಡಬೇಕೆಂಬ ಬುದ್ಧಿವಿಕಾಸಕ್ಕೆ ವಿವಿಧ ಮಾರ್ಗಗಳಿವೆ....

ಇದೆಲ್ಲಾ ಸರಿ; ಆದರೆ, ವಿಶೇಷವಿಚಾರ ವಿವರಣೆಗಳು ಅನುವಾದಕರ ಸ್ವಂತ ವಿಚಾರವೋ....? ಅಥವಾ, ಟಿಪ್ಪಣಿಗಳ ಆಧಾರದಲ್ಲಿ ಬರೆದದ್ದೋ....?

ಹೌದು....ಈ ಪ್ರಶ್ನೆ ಬಹಳ ಪ್ರಸ್ತುತ.... ಶ್ರೀರಘೂತ್ತಮತೀರ್ಥರ ಭಾವಬೋಧ, ಶರ್ಕರಾಶ್ರೀನಿವಾಸಾಚಾರ್ಯರ ವಾಕ್ಯಾರ್ಥಮಂಜರಿ ಹಾಗೂ ಉಳಿದ ಟಿಪ್ಪಣಿಗಳ ಆಧಾರದಲ್ಲಿ ''ವಿವರಣೆ'' ಬರೆಯಲಾಗಿದೆ. ತಾತ್ಪರ್ಯಚಂದ್ರಿಕಾ ಹಾಗೂ ಪ್ರಕಾಶ ಟಿಪ್ಪಣಿಗಳ ಆಧಾರದಲ್ಲಿ ''ವಿಶೇಷವಿಚಾರ'' ಬರೆಯಲಾಗಿದೆ.

ಓಹೋ....!! ಹಾಗಿದ್ದರೆ ಚಂದ್ರಿಕಾ ಹಾಗೂ ಪ್ರಕಾಶ ಸೇರಿದಂತೆ ಎಲ್ಲಾ ಟಿಪ್ಪಣಿಗಳು ಇದರಲ್ಲೇ ಸೇರಿವೆ....ಅಲ್ಲವೇ...!!

ಸರ್ವಥಾ ಇಲ್ಲ. ಬೇರೆ ಟಿಪ್ಪಣಿಗಳ ಕೆಲವು ಭಾಗಗಳ ವಿಚಾರ ಮಾತ್ರ ಇಲ್ಲಿದೆ. ಎಲ್ಲವೂ ಇಲ್ಲ. ಆಯಾ ಟಿಪ್ಪಣಿಗಳನ್ನು ಆಮೂಲಾಗ್ರವಾಗಿ ಓದಿದಾಗಲೇ ಅವುಗಳ ಸ್ವಾರಸ್ಯವನ್ನು ಅನುಭವಿಸಲು ಸಾಧ್ಯ .

ಭಾವದೀಪ ಗ್ರಂಥ ಕೆಲವೊಮ್ಮೆ ಬಲು ಸುಲಭ ಕೆಲವೊಮ್ಮೆ ಬಲು ಕಠಿಣ. ಸುಲಭವಿದ್ದಾಗ ಹೆಚ್ಚು ವಿವರಣೆ ಅಥವಾ ವಿಶೇಷ ವಿಚಾರಗಳನ್ನು ಈ ಪುಸ್ತಕದಲ್ಲಿ ನೀಡಿರುವುದಿಲ್ಲ ಎಲ್ಲಿ ವಿವರಣೆ ಮಾಡಬಹುದೋ, ಎಲ್ಲಿ ವಿಶೇಷ ವಿಚಾರ ನೀಡಬಹುದೋ ಅಲ್ಲಿ ವಿವರಣೆ ಹಾಗೂ ವಿಶೇಷ ವಿಚಾರಗಳನ್ನು ಬರೆಯಲಾಗಿದೆ. ಎಷ್ಟು ಓದಿದರೂ ಮನಸ್ಸಿಗೆ ಕಸಿವಿಸಿ ಹಾಗೇ ಉಳಿದರೆ ''ಒಟ್ಟು ಅಭಿಪ್ರಾಯ'' ಎಂದು ಅಲ್ಲಲ್ಲಿ ಬರೆಯಲಾಗಿದೆ. ಆದಷ್ಟೂ ಸುಲಭ ಶೈಲಿಯಲ್ಲಿ ಸರಳ ಕನ್ನಡದಲ್ಲಿ ಬರೆಯಲು ಪ್ರಯತ್ನಿಸಲಾಗಿದೆ. ಎಷ್ಟೇ ಆದರೂ ವೇದಾಂತದ ಪಾರಿಭಾಷಿಕ ಶಬ್ದಗಳ ಚೌಕಟ್ಟಿನಿಂದ ಹೊರಬಂದು ಬರೆಯಲು ಸಾಧ್ಯವಿಲ್ಲ ....ಅಲ್ಲವೇ...!!

ಇದೆಲ್ಲಾ ಸರಿ.... ಏಕಿಷ್ಟು ದಪ್ಪ ಅಕ್ಷರ....? ಏಕಿಷ್ಟು ಮಧ್ಯದಲ್ಲಿ ಖಾಲಿ ಜಾಗಗಳು....? ಏಕಿಷ್ಟು ಶಿರೋನಾಮೆಗಳು....? ಏಕಿಷ್ಟು ಸಂಪುಟಗಳು....? ಏಕಿಷ್ಟು ದುಬಾರಿ ಹಾಳೆಗಳು....? ಇನ್ನೂ ಸಣ್ಣದಾಗಿ ಮುದ್ರಿಸಿ ಎಂಟನ್ನು ಕಿರುಗಾತ್ರದಲ್ಲಿ ನಾಲ್ಕು ಸಂಪುಟಗಳಲ್ಲಿ ಮುಕ್ತಾಯ ಮಾಡಬಹುದಾಗಿತ್ತು....? ಇದೆಲ್ಲಾ ವ್ಯರ್ಥವಲ್ಲವೇ....?

ಹೌದು....!! ಯಾವುದು ವ್ಯರ್ಥ....!! ಯಾವುದು ಸಾರ್ಥಕ....!! ನಿರ್ಧಾರವಾಗುವುದು ಬಾಹ್ಯದಿಂದಲ್ಲ; ಅಂತರಂಗದ ಭಾವದಿಂದ. ಒಬ್ಬನಿಗೆ ಸಾರ್ಥಕವಾದದ್ದು ಇನ್ನೊಬ್ಬನಿಗೆ ನಿರರ್ಥಕ ಎನಿಸಬಹುದು ಅವರವರ ಭಾವನೆಯೇ ಅವರವರ ಪರಮಾರ್ಥ. ಒಬ್ಬನಿಗೆ ಕಂಡಿರುವ ಸತ್ಯದ ಅಂಶದಲ್ಲಿ ಇನ್ನೊಬ್ಬನಿಗೆ ಸುಳ್ಳಿನ ಅಂಶ ಕಾಣಬಹುದು. ಇನ್ನೊಬ್ಬನ ಭಾವನೆಯಲ್ಲಿ ಮತ್ತೊಬ್ಬನಿಗೆ ಸುಳ್ಳಿನ ಅಂಶ ಕಾಣಬಹುದು. ಹೀಗಿರುವಾಗ ಇದು ಹೀಗೆ ಎಂದು ನಿರ್ಧರಿಸುವುದು ಹೇಗೆ ಸಾಧ್ಯ....? ಭಾವುಕರ ಲೆಕ್ಕಾಚಾರದ ಮುಂದೆ ಅರ್ಥಶಾಸ್ತ್ರಜ್ಞರ ಆರ್ಥಿಕ ಲೆಕ್ಕಾಚಾರ ತಲೆಕೆಳಗಾಗಿಬಿಡುವುದುಂಟು. ಭಾವದೀಪ ರಾಯರ ಪ್ರತಿಬಿಂಬ. ಗ್ರಂಥದ ವೈಭವವೇ ರಾಯರ ಸೇವೆ.

ಈ ಪುಸ್ತಕ ಯಾರಿಗೂ ಭಾರವಲ್ಲ, ಬಲು ಹಗುರ. ಧನದ ವಿನಿಯೋಗವೂ ಹಗುರ. ಅಕ್ಷರಗಳು ಬಲು ಸುಂದರ ಮತ್ತು ದಪ್ಪ. ಎಷ್ಟೇ ವರ್ಷಗಳಾದರೂ ಹಾಳಾಗದ ಹಾಳೆ. ಯೋಜನೆಯೂ ಕೂಡ ಬಲು ಆಕರ್ಷಕ.

ಇಷ್ಟೆಲ್ಲಾ ಅನುಕೂಲ ಮಾಡುತ್ತಿರುವವರು ಯಾರು...? ಇಂತಹ ಒಳ್ಳೆ ವಿಚಾರ ಮಾಡಿದವರು ಯಾರು....? ಗೊಂಡಾರಣ್ಯದಲ್ಲಿ ದಿಕ್ಕುತಪ್ಪಿದವರಿಗೆ ದಾರಿ ತೋರಲು ಬಂದ ಆಪ್ತರು ಯಾರು....?

## ಶ್ರೀಸುಬುಧೇಂದ್ರತೀರ್ಥ ಶ್ರೀಪಾದರು

ಬೇರೆ ಯಾರೂ ಅಲ್ಲ.... !! ಶ್ರೀರಾಘವೇಂದ್ರಸ್ವಾಮಿಗಳ ಮಠದ ಪೀಠಾಧಿಪತಿಗಳಾದ ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥ ಶ್ರೀಪಾದರು.

ಇವರ ಬಗ್ಗೆ ಎಲ್ಲರಿಗೂ ತಿಳಿದಿದೆ. ತಿಳಿದಿರುವುದಷ್ಟೇ ಅಲ್ಲ, ಕಲ್ಪನೆಗೂ ಮೀರಿದ ಇವರ ಸಾಧನೆಗಳನ್ನು ಕಂಡು ಎಲ್ಲರೂ ಅಚ್ಚರಿ ಪಟ್ಟಿದ್ದಾರೆ. ಇಂದಿನ ದಿವಸಗಳಲ್ಲಿ ಅನೇಕ ಬೃಹತ್ ಕಾರ್ಯಗಳನ್ನು ಹಮ್ಮಿಕೊಂಡು ಲೋಕರಕ್ಷಣೆಯ ಕಾರ್ಯದಲ್ಲಿ ತೊಡಗಿಸಿಕೊಂಡಿದ್ದಾರೆ. ಸತ್ಯ ಹಾಗೂ ಪ್ರಾಮಾಣಿಕತೆಗಳ ಬಗ್ಗೆ ಹೋರಾಟ ನಡೆಸಿ ರಾಯರ ಸೇವೆಯಲ್ಲಿ ತಲ್ಲೀನರಾಗಿರುವರು. ಪ್ರಕೃತ ಈ ಭಾವದೀಪ ಯೋಜನೆಯನ್ನು ಹಮ್ಮಿಕೊಂಡು ಬುಭುತ್ಸುಗಳಿಗೆ ಅತ್ಯುಪಯುಕ್ತವಾದ ಕಾರ್ಯವನ್ನು ಮಾಡುತ್ತಿರುವರು. ಸಜ್ಜನ ಪ್ರಪಂಚಕ್ಕೆ ಆಶಾವಾದಿಗಳಾಗಿ ವಿರಾಜಿಸುತ್ತಿರುವರು.

ಶ್ರೀಗಳಿಗೆ ಪ್ರತಿಯೊಂದು ಕಾರ್ಯಗಳಲ್ಲಿರುವ ಉತ್ಸಾಹ ಅದಮ್ಯ... ಅದರಲ್ಲಿಯೂ ಜ್ಞಾನಕಾರ್ಯದಲ್ಲಿ ಎಲ್ಲಿಲ್ಲದ ಒಲವು.... ನ್ಯಾಯಸುಧಾದಿ ಗ್ರಂಥಗಳ ಪಾಠಪ್ರವಚನದಲ್ಲಿ

ಬಲು ಶ್ರದ್ಧೆ. ಅಕೃತ್ರಿಮ.... ಸರಳತೆ.... ಅವಿಶಂಕೆ... ಮೊದಲಾದ ಗುಣಗಳಿಂದ ಶ್ರೀಗಳು ಬಲು ಪ್ರಸಿದ್ಧರು.

ಭಾವದೀಪದ ಈ ಬೃಹತ್ ಕಾರ್ಯವು ನನ್ನಿಂದ ಸಾಧ್ಯವೋ....? ಎಂಬ ಸಂಶಯದಲ್ಲಿ ಅದೊಂದು ದಿವಸ ಮಂತ್ರಾಲಯದಲ್ಲಿ ರಾಯರ ಎದುರು ನಿಂತಿದ್ದೆ. ಅದೇ ಕ್ಷಣದಲ್ಲಿ ರಾಯರ ಪೂಜೆ ಮುಗಿಸಿ ಬಂದ ಶ್ರೀಗಳು ನೇರ ನನ್ನ ಬಳಿ ಬಂದು ''ನೀವು ಅಂದುಕೊಂಡ ಭಾವದೀಪದ ಕಾರ್ಯ ನಿರ್ವಿಘ್ನವಾಗಿ ನೆರವೇರುತ್ತದೆ'' ಎಂದು ಗಟ್ಟಿಯಾಗಿ ಹೇಳಿ ಕೈತುಂಬ ಫಲಮಂತ್ರಾಕ್ಷತೆ ನೀಡಿದರು. ಆ ಕ್ಷಣದಲ್ಲಿ ನಾನು ದಿಗ್ಭ್ರಾಂತನಾದೆ...!! ಶ್ರೀಗಳ... ಮಾತು....!! ಮೈ ನಿಮಿರೇಳಿಸಿತು....!! ಕೆಲವೇ ಗಂಟೆಗಳಲ್ಲಿ ಭಾವದೀಪದ ಯೋಜನೆಯ ಬಗ್ಗೆ ಇದ್ದ ಸಮಸ್ಯೆಗಳೆಲ್ಲಾ ಪರಿಹಾರವಾಗಿ ರಾಜಮಾರ್ಗ ನಿರ್ಮಾಣವಾಯಿತು.

ಮತ್ತೊಂದು ರೋಮಾಂಚನ ಪ್ರಸಂಗ - ಭಾವದೀಪಗ್ರಂಥದ ಅನುವಾದವನ್ನು ಹಿಡಿದುಕೊಂಡು ಶ್ರೀಗಳ ಬಳಿ ತೆರಳಿದ್ದೆ. ವಿಚಾರ ಮಾಡದೆ ಬಲು ವಿಶ್ವಾಸದಲ್ಲಿ ಶ್ರೀಮಠದ ವತಿಯಿಂದ ಪುಸ್ತಕವನ್ನು ಮುದ್ರಿಸುತ್ತೇನೆಂದು ಹೇಳಿದರು. ಆ ಸಂದರ್ಭದಲ್ಲಿ ಅಲ್ಲಿಯೇ ಕುಳಿತ ಶ್ರೀಗಳ ಆಪ್ತರೊಬ್ಬರು ಭಾವದೀಪಗ್ರಂಥದ ಪ್ರಕಾಶನಕ್ಕೆ ತಗಲುವ ಸಂಪೂರ್ಣ ವೆಚ್ಚವನ್ನು ದಾನಿಗಳ ಮೂಲಕ ಏರ್ಪಾಡು ಮಾಡುವುದಾಗಿ ತಿಳಿಸಿದರು. ತಕ್ಷಣ ಶ್ರೀಗಳು ''ಬೇಡ, ನಮ್ಮ ಪಾದಕಾಣಿಕೆಯಿಂದಲೇ ಪ್ರಕಾಶನವಾಗಲಿ'' ಎಂದು ಹೇಳಿ ಕೂಡಲೇ ಪಾದಕಾಣಿಕೆಯನ್ನು ಪುಸ್ತಕ ಮುದ್ರಣದ ವೆಚ್ಚಕ್ಕೆಂದು ನನ್ನ ಕೈಗೆ ನೀಡಿ ಆಶೀರ್ವದಿಸಿ ಕಳುಹಿಸಿದರು.

ಈ ಒಂದು ಘಟನೆಯಿಂದ ಶ್ರೀಗಳಲ್ಲಿರುವ ಔದಾರ್ಯ, ಅಪ್ರತಿಮ ವಿಶ್ವಾಸ, ರಾಯರ ಗ್ರಂಥಗಳ ಬಗ್ಗೆ ಶ್ರದ್ಧೆ, ಜ್ಞಾನಕಾರ್ಯದಲ್ಲಿ ಒಲವು, ಸತ್ಕಾರ್ಯಗಳನ್ನು ವಿನಾಕಾರಣ ಮುಂದೂಡದಿರುವಿಕೆ, ಪ್ರತಿಭೆ-ವಿದ್ಯೆಗಳ ಪ್ರೋತ್ಸಾಹ, ನಿರಹಂಕಾರ-ಸರಳ-ಸಜ್ಜನಿಕೆಗಳನ್ನು ಪ್ರತ್ಯಕ್ಷವಾಗಿ ಅನುಭವಿಸುವಂತಾಯಿತು. ಆದ್ದರಿಂದಲೇ ರಾಯರು ಪವಾಡತುಲ್ಯವಾಗಿ ಇವರನ್ನು ಪೀಠಾಧಿಪತಿಗಳನ್ನಾಗಿ ನೇಮಿಸಿರುವುದರಲ್ಲಿ ಸಂದೇಹವಿಲ್ಲ ಮತ್ತು ಮುಂದಿನ ದಿವಸಗಳಲ್ಲಿ ಇವರಿಂದ ವ್ಯಾಪಕವಾಗಿ ಜ್ಞಾನಕಾರ್ಯ ನಡೆಯುವುದರಲ್ಲಿಯೂ ಸಂದೇಹವಿಲ್ಲ.

ಪ್ರಸ್ತುತ ಈ ಬೃಹತ್ಕಾರ್ಯದ ಸಂಪೂರ್ಣ ಆತ್ಮಶಕ್ತಿ ಶ್ರೀಗಳವರೇ ಆಗಿರುತ್ತಾರೆ. ಲೇಖಕನು ಲೇಖನಿಯಿಂದ ಅಕ್ಷರಗಳನ್ನು ಬರೆಯುವಂತೆ ಶ್ರೀಗಳು ಲೇಖಕರಾಗಿ ಈ ಗ್ರಂಥವನ್ನು

ಬರೆಸಬೇಕು. ನನ್ನದು ಲೇಖನಿಯ ಪಾತ್ರ ಮಾತ್ರ. ನಮಗೆಲ್ಲಾ ಅತ್ಯಂತ ಹೆಮ್ಮೆಯ ಗುರುಗಳಾದ ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರಿಗೆ ಅನಂತ ನಮಸ್ಕಾರಗಳು ಹಾಗೂ ಕೃತಜ್ಞತೆಗಳು.

## ಕೃತಜ್ಞತೆ

ಅಶನ ವಸನಗಳ ಜೊತೆ ವಿದ್ಯಾದಾನ ಮಾಡಿ ವ್ಯಕ್ತಿತ್ವವನ್ನು ರೂಪಿಸಿದ ನೆಚ್ಚಿನ ವಿದ್ಯಾಗುರುಗಳಾದ ಶ್ರೀವಿಶ್ವೇಶತೀರ್ಥರ ಚರಣಕಮಲಗಳಲ್ಲಿ ಭಕ್ತಿಯ ಭಾರದಿಂದ ಸದಾ ಆನಮಿಪೆ.

ಶ್ರೀಪಾದಪುತ್ರರಾದ ಪಂಡಿತಮೂರ್ಧನ್ಯರಾದ ಪೂಜ್ಯ ॥ ಶ್ರೀ ರಾಜಾ ಎಸ್. ಗಿರಿ ಆಚಾರ್ಯರು ಪುಸ್ತಕಪ್ರಕಾಶನಕ್ಕೆ ಸಂಪೂರ್ಣ ಪ್ರೋತ್ಸಾಹ ನೀಡಿ ಹರಸಿದ್ದಾರೆ. ಸುಂದರ ಮುನ್ನುಡಿ ಬರೆದು ಯೋಜನೆಗೆ ಚಾಲನೆ ನೀಡಿದ್ದಾರೆ. ಇವರಿಗೆ ನನ್ನ ಅನಂತ ಕೃತಜ್ಞತಾಪೂರ್ವಕ ನಮನಗಳು.

ನಿವೃತ್ತ ಕುಲಪತಿಗಳೂ ಪ್ರಚಂಡ ವಿದ್ಯಾವಂತರೂ ಆದ ಸರಳ ಸಜ್ಜನಿಕೆಯುಳ್ಳ ಗುರುಸಾರ್ವಭೌಮಸಂಶೋಧನಾ ಮಂದಿರದ ಕಾರ್ಯನಿರ್ವಾಹಕ ನಿರ್ದೇಶಕರಾದ ಡಾ॥ ವಾದಿರಾಜಾಚಾರ್ಯ ಆರ್. ಪಂಚಮುಖಿ ಇವರು ಆಂಗ್ಲಭಾಷೆಯಲ್ಲಿ ಪ್ರಾಸ್ತಾವಿಕ ಬರೆದು ನೀಡಿದ್ದಾರೆ. ಬಹಳ ಅಭಿಮಾನದಿಂದ ಈ ಪುಸ್ತಕವನ್ನು ಅವಲೋಕಿಸಿ ಸಂತೋಷಪಟ್ಟಿದ್ದಾರೆ. ಇವರಿಗೂ ನನ್ನ ನಮನಗಳು.

ವಿಶೇಷವಿಚಾರ ಬರೆಯಲು ಗಹನವಿಷಯಗಳನ್ನು ಹಾಗೂ ಅಪೂರ್ವವಿಷಯಗಳನ್ನು ಸುಲಲಿತವಾಗಿ ತಿಳಿಸಿಕೊಟ್ಟ ಎಲೆಮರೆ ಹಣ್ಣಾಗಿ ಸಾಧನೆಯಲ್ಲಿ ಮುಳುಗಿದ ವಿದ್ವಾನ್ ಶ್ರೀರಂಗಂ ಆರ್. ವೇಂಕಟೇಶಾಚಾರ್ಯರಿಗೆ ಅನಂತ ನಮಸ್ಕಾರಗಳು. ಇವರ ಉಪಕಾರ ಎಂದೂ ಯಾವ ಕ್ಷಣದಲ್ಲಿಯೂ ಮರೆಯಲಾರೆ.

ಜನ್ಮಾಧಿಕರಣದಿಂದ ಆನಂದಮಯಾಧಿಕರಣದ ತನಕ ಮಾಡಿರುವ ಭಾವದೀಪದ ಅನುವಾದ ಕಾರ್ಯದಲ್ಲಿ ಸಂಪೂರ್ಣ ಉಪಕರಿಸಿದ ವಿದ್ವಾನ್ ಎನ್. ರವಿಕುಮಾರಾಚಾರ್ಯರ ಉಪಕಾರ ನೆನೆದು ಕೃತಜ್ಞತೆ ಸಲ್ಲಿಸುವೆ.

ಜನ್ಮದಾತರಾದ ಪಿ. ಎಸ್. ನಾಗರಾಜರಾವ್ ಹಾಗೂ ಕುಂ॥ ಸೌ॥ ಪರಿಮಳ ಇವರ ಪ್ರೋತ್ಸಾಹ, ವಾತ್ಸಲ್ಯ, ಉತ್ಸಾಹಗಳಿಗೆ ನಿರಂತರ ನಮಿಸುವೆ. ಹಾಗೂ ಹಗಲು ರಾತ್ರಿ ಕುಳಿತು ಬರೆಯಲು ಸಂಪೂರ್ಣ ಅನುಕೂಲ ಮಾಡಿಕೊಟ್ಟು ಕೆಲವು ಭಾಗ ಅಕ್ಷರ ಜೋಡಣೆಯಲ್ಲಿಯೂ

ಸಹಕರಿಸಿದ ಮನಸ್ಸಿಗೆ ಶಕ್ತಿ ತುಂಬಿದ ಅಣ್ಣ ಶ್ರೀನಿವಾಸನಿಗೆ ಕೃತಜ್ಞತೆಯನ್ನು ಸಲ್ಲಿಸುವೆ. ನನ್ನ ಪ್ರತಿಯೊಂದು ಕಾರ್ಯಗಳ ವಿಘ್ನಪರಿಹಾರಕರಾದ ಅಣ್ಣ ವಿಜಯೀಂದ್ರಾಚಾರ್ಯರಿಗೂ ಕೃತಜ್ಞತೆಯ ನಮನಗಳು.

ಪವನ್‌ಪ್ರಿಂಟರ್ಸ್ ಮಾಲೀಕ ಮಂಜುನಾಥ ಬಹಳ ಶ್ರಮಪಟ್ಟು ಅಲ್ಪಕಾಲದಲ್ಲಿ ಸುಂದರವಾಗಿ ಹಾಗೂ ಅಚ್ಚುಕಟ್ಟಾಗಿ ಪುಸ್ತಕವನ್ನು ಮುದ್ರಣ ಮಾಡಿ ನೀಡಿರುವರು. ಇವರಿಗೆ ಶ್ರೀರಾಘವೇಂದ್ರಗುರುಸಾರ್ವಭೌಮರು ಇನ್ನೂ ಹೆಚ್ಚಿನ ಶಕ್ತಿ ತುಂಬಿ ಆಶೀರ್ವದಿಸಲಿ.

ಈ ಪುಸ್ತಕದ ಡಿ.ಟಿ.ಪಿ ಕಾರ್ಯದಲ್ಲಿ ನಿರತರಾದ ಕುಂ|| ಸೌ|| ಎಸ್. ನಾಗಲತ ಇವರ ಬಗ್ಗೆ ಎಷ್ಟು ಹೇಳಿದರೂ ಕಮ್ಮಿ. ಹಗಲಿರಳೂ ಶ್ರಮಪಟ್ಟು ಕಣ್ಣಲ್ಲಿ ಕಣ್ಣಿಟ್ಟು ತಪ್ಪು ಬಾರದಂತೆ ಎಚ್ಚರವಹಿಸಿ ಸಮಯಕ್ಕೆ ತಕ್ಕಂತೆ ಏಕೈಕರಾಗಿ ಕೆಲಸ ಮಾಡಿಕೊಟ್ಟ ಇವರಿಗೆ ಎಂದೆಂದೂ ಕೃತಜ್ಞನಾಗಿದ್ದೇನೆ. ರಾಯರು ಇವರಿಗೆ ಎಲ್ಲಾ ರೀತಿಯಲ್ಲಿಯೂ ಶ್ರೇಯಸ್ಸನ್ನು ಉಂಟುಮಾಡಲಿ ಎಂದು ಪ್ರಾರ್ಥಿಸುವೆ; ಹಾಗೂ ಕೆ. ಗಿರಿಯವರು ಎಲ್ಲಾ ರೀತಿಯಲ್ಲಿಯೂ ಸಹಕರಿಸಿದ್ದಾರೆ. ಇವರಿಗೂ ಅನಂತ ಕೃತಜ್ಞತೆಗಳು.

ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಉಪಕರಿಸಿದ ಎಲ್ಲ ಮಹನೀಯರಿಗೂ ಮತ್ತೊಮ್ಮೆ ಕೃತಜ್ಞತೆಗಳು.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ
ಬೆಂಗಳೂರು.

ಬರೆಸಬೇಕು. ನನ್ನದು ಲೇಖನಿಯ ಪಾತ್ರ ಮಾತ್ರ. ನಮಗೆಲ್ಲಾ ಅತ್ಯಂತ ಹೆಮ್ಮೆಯ ಗುರುಗಳಾದ ಪರಮಪೂಜ್ಯ ಶ್ರೀಸುಬುಧೇಂದ್ರತೀರ್ಥಶ್ರೀಪಾದಂಗಳವರಿಗೆ ಅನಂತ ನಮಸ್ಕಾರಗಳು ಹಾಗೂ ಕೃತಜ್ಞತೆಗಳು.

## ಕೃತಜ್ಞತೆ

ಅಶನ ವಸನಗಳ ಜೊತೆ ವಿದ್ಯಾದಾನ ಮಾಡಿ ವ್ಯಕ್ತಿತ್ವವನ್ನು ರೂಪಿಸಿದ ನೆಚ್ಚಿನ ವಿದ್ಯಾಗುರುಗಳಾದ ಶ್ರೀವಿಶ್ವೇಶತೀರ್ಥರ ಚರಣಕಮಲಗಳಲ್ಲಿ ಭಕ್ತಿಯ ಭಾರದಿಂದ ಸದಾ ಆನಮಿಪೆ.

ಶ್ರೀಪಾದಪುತ್ರರಾದ ಪಂಡಿತಮೂರ್ಧನ್ಯರಾದ ಪೂಜ್ಯ ॥ ಶ್ರೀ ರಾಜಾ ಎಸ್. ಗಿರಿ ಆಚಾರ್ಯರು ಪುಸ್ತಕಪ್ರಕಾಶನಕ್ಕೆ ಸಂಪೂರ್ಣ ಪ್ರೋತ್ಸಾಹ ನೀಡಿ ಹರಸಿದ್ದಾರೆ. ಸುಂದರ ಮುನ್ನುಡಿ ಬರೆದು ಯೋಜನೆಗೆ ಚಾಲನೆ ನೀಡಿದ್ದಾರೆ. ಇವರಿಗೆ ನನ್ನ ಅನಂತ ಕೃತಜ್ಞತಾಪೂರ್ವಕ ನಮನಗಳು.

ನಿವೃತ್ತ ಕುಲಪತಿಗಳೂ ಪ್ರಚಂಡ ವಿದ್ಯಾವಂತರೂ ಆದ ಸರಳ ಸಜ್ಜನಿಕೆಯುಳ್ಳ ಗುರುಸಾರ್ವಭೌಮಸಂಶೋಧನಾ ಮಂದಿರದ ಕಾರ್ಯನಿರ್ವಾಹಕ ನಿರ್ದೇಶಕರಾದ ಡಾ॥ ವಾದಿರಾಜಾಚಾರ್ಯ ಆರ್. ಪಂಚಮುಖಿ ಇವರು ಆಂಗ್ಲಭಾಷೆಯಲ್ಲಿ ಪ್ರಾಸ್ತಾವಿಕ ಬರೆದು ನೀಡಿದ್ದಾರೆ. ಬಹಳ ಅಭಿಮಾನದಿಂದ ಈ ಪುಸ್ತಕವನ್ನು ಅವಲೋಕಿಸಿ ಸಂತೋಷಪಟ್ಟಿದ್ದಾರೆ. ಇವರಿಗೂ ನನ್ನ ನಮನಗಳು.

ವಿಶೇಷವಿಚಾರ ಬರೆಯಲು ಗಹನವಿಷಯಗಳನ್ನು ಹಾಗೂ ಅಪೂರ್ವವಿಷಯಗಳನ್ನು ಸುಲಲಿತವಾಗಿ ತಿಳಿಸಿಕೊಟ್ಟ ಎಲೆಮರೆ ಹಣ್ಣಾಗಿ ಸಾಧನೆಯಲ್ಲಿ ಮುಳುಗಿದ ವಿದ್ವಾನ್ ಶ್ರೀರಂಗಂ ಆರ್. ವೇಂಕಟೇಶಾಚಾರ್ಯರಿಗೆ ಅನಂತ ನಮಸ್ಕಾರಗಳು. ಇವರ ಉಪಕಾರ ಎಂದೂ ಯಾವ ಕ್ಷಣದಲ್ಲಿಯೂ ಮರೆಯಲಾರೆ.

ಜನ್ಮಾಧಿಕರಣದಿಂದ ಆನಂದಮಯಾಧಿಕರಣದ ತನಕ ಮಾಡಿರುವ ಭಾವದೀಪದ ಅನುವಾದ ಕಾರ್ಯದಲ್ಲಿ ಸಂಪೂರ್ಣ ಉಪಕರಿಸಿದ ವಿದ್ವಾನ್ ಎನ್. ರವಿಕುಮಾರಾಚಾರ್ಯರ ಉಪಕಾರ ನೆನೆದು ಕೃತಜ್ಞತೆ ಸಲ್ಲಿಸುವೆ.

ಜನ್ಮದಾತರಾದ ಪಿ. ಎಸ್. ನಾಗರಾಜರಾವ್ ಹಾಗೂ ಕುಂ॥ ಸೌ॥ ಪರಿಮಳ ಇವರ ಪ್ರೋತ್ಸಾಹ, ವಾತ್ಸಲ್ಯ, ಉತ್ಸಾಹಗಳಿಗೆ ನಿರಂತರ ನಮಿಸುವೆ. ಹಾಗೂ ಹಗಲು ರಾತ್ರಿ ಕುಳಿತು ಬರೆಯಲು ಸಂಪೂರ್ಣ ಅನುಕೂಲ ಮಾಡಿಕೊಟ್ಟು ಕೆಲವು ಭಾಗ ಅಕ್ಷರ ಜೋಡಣೆಯಲ್ಲಿಯೂ

ಸಹಕರಿಸಿದ ಮನಸ್ಸಿಗೆ ಶಕ್ತಿ ತುಂಬಿದ ಅಣ್ಣ ಶ್ರೀನಿವಾಸನಿಗೆ ಕೃತಜ್ಞತೆಯನ್ನು ಸಲ್ಲಿಸುವೆ. ನನ್ನ ಪ್ರತಿಯೊಂದು ಕಾರ್ಯಗಳ ವಿಘ್ನಪರಿಹಾರಕರಾದ ಅಣ್ಣ ವಿಜಯೀಂದ್ರಾಚಾರ್ಯರಿಗೂ ಕೃತಜ್ಞತೆಯ ನಮನಗಳು.

ಪವನ್‌ಪ್ರಿಂಟರ್ಸ್ ಮಾಲೀಕ ಮಂಜುನಾಥ ಬಹಳ ಶ್ರಮಪಟ್ಟು ಅಲ್ಪಕಾಲದಲ್ಲಿ ಸುಂದರವಾಗಿ ಹಾಗೂ ಅಚ್ಚುಕಟ್ಟಾಗಿ ಪುಸ್ತಕವನ್ನು ಮುದ್ರಣ ಮಾಡಿ ನೀಡಿರುವರು. ಇವರಿಗೆ ಶ್ರೀರಾಘವೇಂದ್ರಗುರುಸಾರ್ವಭೌಮರು ಇನ್ನೂ ಹೆಚ್ಚಿನ ಶಕ್ತಿ ತುಂಬಿ ಆಶೀರ್ವದಿಸಲಿ.

ಈ ಪುಸ್ತಕದ ಡಿ.ಟಿ.ಪಿ ಕಾರ್ಯದಲ್ಲಿ ನಿರತರಾದ ಕುಂ॥ ಸೌ॥ ಎಸ್. ನಾಗಲತ ಇವರ ಬಗ್ಗೆ ಎಷ್ಟು ಹೇಳಿದರೂ ಕಮ್ಮಿ. ಹಗಲಿರಳೂ ಶ್ರಮಪಟ್ಟು ಕಣ್ಣಲ್ಲಿ ಕಣ್ಣಿಟ್ಟು ತಪ್ಪು ಬಾರದಂತೆ ಎಚ್ಚರವಹಿಸಿ ಸಮಯಕ್ಕೆ ತಕ್ಕಂತೆ ಏಕೈಕರಾಗಿ ಕೆಲಸ ಮಾಡಿಕೊಟ್ಟ ಇವರಿಗೆ ಎಂದೆಂದೂ ಕೃತಜ್ಞನಾಗಿದ್ದೇನೆ. ರಾಯರು ಇವರಿಗೆ ಎಲ್ಲಾ ರೀತಿಯಲ್ಲಿಯೂ ಶ್ರೇಯಸ್ಸನ್ನು ಉಂಟುಮಾಡಲಿ ಎಂದು ಪ್ರಾರ್ಥಿಸುವೆ; ಹಾಗೂ ಕೆ. ಗಿರಿಯವರು ಎಲ್ಲಾ ರೀತಿಯಲ್ಲಿಯೂ ಸಹಕರಿಸಿದ್ದಾರೆ. ಇವರಿಗೂ ಅನಂತ ಕೃತಜ್ಞತೆಗಳು.

ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಉಪಕರಿಸಿದ ಎಲ್ಲ ಮಹನೀಯರಿಗೂ ಮತ್ತೊಮ್ಮೆ ಕೃತಜ್ಞತೆಗಳು.

ಲೇಖಕ - ಬೆಮ್ಮತ್ತಿ ವೇಂಕಟೇಶಾಚಾರ್ಯ

ಬೆಂಗಳೂರು.

# ತತ್ವಪ್ರಕಾಶಿಕಾ - ಭಾವದೀಪ

# ಸಾರಾಂಶ

## ಜಿಜ್ಞಾಸಾಧಿಕರಣ

ಲಕ್ಷ್ಮೀನಾರಾಯಣಂ ನತ್ವಾ ಪೂರ್ಣಬೋಧಾನ್ ಗುರೂನಪಿ ।
ತತ್ವಪ್ರಕಾಶಿಕಾಭಾವದೀಪಂ ಕುರ್ಯಾಂ ಯಥಾಮತಿ ॥

ಲಕ್ಷ್ಮೀನಾರಾಯಣನನ್ನು ನಮಸ್ಕರಿಸಿ, ಗುರುಗಳಾದ ಪೂರ್ಣಪ್ರಜ್ಞರನ್ನೂ ಸಹ ನಮಿಸಿ, ತತ್ವಪ್ರಕಾಶಿಕಾಗ್ರಂಥಕ್ಕೆ ಬುದ್ಧಿಗೆ ನಿಲುಕಿದಷ್ಟು ''ಭಾವದೀಪ'' ಎಂಬ ವ್ಯಾಖ್ಯಾನವನ್ನು ರಚಿಸುತ್ತಿದ್ದೇವೆ.

ತತ್ವಪ್ರಕಾಶಿಕಾಽಽಕೂತಂ ಚಂದ್ರಿಕಾತಃಪ್ರಕಾಶಿತಮ್ ।
ಅಪಿ ಮಂದಕೃತೇ ಸರ್ವವಿಷಯಾ ಚ ಕೃತಿರ್ಮಮ ॥

ವಸ್ತುತಃ ತತ್ವಪ್ರಕಾಶಿಕೆಯ ಅಭಿಪ್ರಾಯವನ್ನು ಚಂದ್ರಿಕೆಯಲ್ಲೇ ಸ್ಪಷ್ಟಪಡಿಸಿದ್ದಾರೆ. ಆದರೂ ಪ್ರತಿಪಂಕ್ತಿಗಳ ಅರ್ಥವನ್ನು ನಿರೂಪಿಸುವುದಕ್ಕಾಗಿ ಈ ಕೃತಿಯು ಹೊರಟಿದೆ. ಮಂದಜನರಿಗೆ ಉಪಯೋಗವಾಗಬೇಕೆಂಬುದೇ ಇದರ ಉದ್ದೇಶ.

ನೂತನೈರುದಿತಾ ಯೇ ತೇ ದೋಷಾಸ್ತೇಷಾಮಲಗ್ನತಾಮ್ ।
ಸಂಪ್ರದರ್ಶಯಿತುಂ ಚಾಽತಃ ಪ್ರಸನ್ನಾಃ ಸಂತು ಸಜ್ಜನಾಃ ॥

ತತ್ವಪ್ರಕಾಶಿಕಾಗ್ರಂಥದ ಮೇಲೆ ಹೊಸದಾಗಿ ಮಾಡಲ್ಪಟ್ಟ ಎಲ್ಲ ಆಕ್ಷೇಪಗಳನ್ನು ನಿರಾಕರಿಸುವುದು ಈ ಕೃತಿಯ ಮತ್ತೊಂದು ಉದ್ದೇಶ. ಇದರಿಂದ ಸಜ್ಜನರೆಲ್ಲರೂ ಸಂತುಷ್ಟರಾಗಲಿ.

ಟೀಕಾಕೃತ್ಪಾದರ ಮೊದಲ ಮಂಗಲಪದ್ಯ ಭಾಷ್ಯದ ಮಂಗಲಪದ್ಯಕ್ಕೆ ವ್ಯಾಖ್ಯಾನ ರೂಪವಾಗಿದೆ. ಅದರಂತೆಯೇ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವಾಗಿದೆ. ಮುಂದೆ ಸೂತ್ರಕಾರರಿಗೂ ಭಾಷ್ಯಕಾರರಿಗೂ ನಮಿಸಿ ಭಾಷ್ಯಕ್ಕೆ ಟೀಕೆ ರಚಿಸಲು ಸಂಕಲ್ಪಿಸುತ್ತಾರೆ. ಅದರಿಂದ ವಾಕ್‌ಶುದ್ಧಿಯಾಗಲಿ ಎನ್ನುತ್ತಾರೆ ಟೀಕಾಕೃತ್ಪಾದರು.

### ಟೀಕೆಯ ಮೊದಲ ಅಥಶಬ್ದ

ಸಮಗ್ರ ಗ್ರಂಥದ ವ್ಯಾಖ್ಯಾನವನ್ನು ಸಂಕ್ಷೇಪವಾಗಿ ಮಂಗಲಪದ್ಯದಲ್ಲಿ ಮಾಡಿ ಮುಂದೆ ಭಾಷ್ಯದ ಪ್ರತಿವಾಕ್ಯ ಪ್ರತಿಪದಗಳ ವ್ಯಾಖ್ಯಾನ ಪ್ರಾರಂಭಿಸುತ್ತಿದ್ದೇವೆ ಎನ್ನುತ್ತಿದ್ದಾರೆ, ಅಥಶಬ್ದದಿಂದ.

## ನಾರಾಯಣ ಶಬ್ದಾರ್ಥ

ನಾರಾಯಣನೆ ಬ್ರಹ್ಮಸೂತ್ರ ಪ್ರತಿಪಾದ್ಯನೆಂದು ಸೂಚಿಸಲು ಭಾಷ್ಯದಲ್ಲಿರುವ ನಾರಾಯಣಶಬ್ದ ಬ್ರಹ್ಮಶಬ್ದ ಸಮಾನಾರ್ಥಕವೆಂದೂ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವೆಂದೂ ಟೀಕಾಕೃತ್ಪಾದರು ಹೇಳುತ್ತಾರೆ. 'ನಾರ'ವೆಂದರೆ ಅಮೃತತ್ವಕ್ಕೆ ಮೋಕ್ಷಕ್ಕೆ ಸಾಧನವಾದ ತತ್ವಜ್ಞಾನ. ಅಥವಾ ನಿರ್ದುಃಖವಾದ ಸ್ಥಾನಕ್ಕೆ ಒಯ್ಯುವ ತತ್ವಜ್ಞಾನ. ಅಥವಾ ನಿರ್ದೋಷ ವೇದೋತ್ಪನ್ನವಾದ ತತ್ವಜ್ಞಾನ. ಇಂಥ ತತ್ವಜ್ಞಾನಕ್ಕೆ ವಿಷಯನಾಗಿ ಆಶ್ರಯನೆನಿಸಿದವನು ನಾರಾಯಣ. ಇಲ್ಲಿ 'ನಾರ'ವೆಂದರೆ ನಿರ್ದೋಷವಾದ ವೇದ. ಅದರಿಂದ ಬರುವ ಜ್ಞಾನವೂ 'ನಾರ'. ಅಣ್ ಪ್ರತ್ಯಯ ಸೇರಿಸಬೇಕು. ಛ ಪ್ರತ್ಯಯ ಬಂದು ನಾರೀಯ ಎಂದಾದೀತು ಎಂಬ ಸಮಸ್ಯೆಗೆ ಪರಿಹಾರವಿದೆ.

## ನಾರಾಯಣ ಶಬ್ದದಲ್ಲಿ ನಲೋಪಾಭಾವ

ದೋಷದೂರ ಎಂಬ ಅರ್ಥದಲ್ಲಿ 'ನ ಅರಾಯನ'ವು 'ನಾರಾಯಣ' ಎಂದಾಗುವುದು. ಆದರೆ ಇಲ್ಲಿ ನಲೋಪ ಬಂದೀತು. 'ನ ಆರೋಗ್ಯ' 'ಅನಾರೋಗ್ಯ'ವಾಗುವಂತೆ 'ನ ಅರಾಯನ'ವು 'ಅನರಾಯಣ' ಏಕಾಗುವುದಿಲ್ಲ? ಇದಕ್ಕೆ ಪರಿಹಾರ - 'ನಲೋಪವನ್ನು ಹೇಳುವ ಸೂತ್ರದಲ್ಲಿ ವಿಕಲ್ಪವನ್ನು ಹೇಳುವ 'ವಿಭಾಷಾ' ಪದದ ಅನುವೃತ್ತಿ ಇದೆ ಎಂದು ನ್ಯಾಸಗ್ರಂಥದಲ್ಲಿ ಹೇಳಿದೆ' ಎಂದು ಹೇಳಬಹುದು. ವಸ್ತುತಃ ಅನುವೃತ್ತಿ ಬೇಡ. ಆದರಿಂದ ಇಲ್ಲಿ 'ನ ಅರಾಯನ' ಎಂಬಲ್ಲಿ 'ನಞ್' ಎಂಬ ಅವ್ಯಯವಲ್ಲ. 'ನ' ಎಂಬ ಅವ್ಯಯ ಎಂದಿಟ್ಟುಕೊಳ್ಳಬೇಕು.

## ನಾರಾಯಣ ಶಬ್ದದಲ್ಲಿ ಣತ್ವ

ರೇಫದ ಮುಂದೆ ಬರುವ ನಕಾರಕ್ಕೆ ಣಕಾರ ಬರುವುದು ಸಾಮಾನ್ಯವಾಗಿ ಅವೆರಡೂ ಒಂದು ಅಖಂಡಪದದಲ್ಲಿ ಬಂದಾಗ ಮಾತ್ರ. ಪ್ರಕೃತದಲ್ಲಿ 'ನಾರ ಅಯನ' ಎಂದು ಎರಡು ಪದ ಸೇರಿ ಒಂದಾಗಿದೆ. ಅಖಂಡವಲ್ಲ. ಆದರೂ ರೂಢಿಯ ಹೆಸರುಗಳಲ್ಲಿ ಈ ನಿಯಮವಿಲ್ಲ. ಆದರಿಂದ ಣತ್ವ ಬರಬಹುದು. 'ಶೂರ್ಪ ನಖಾ' ಶೂರ್ಪಣಖಾ ಎಂದಾಗುತ್ತದೆ. ಹಾಗೇ ಇದು.

## ನಾರಾಯಣ ಶಬ್ದದ ಪುಲ್ಲಿಂಗ

'ನಾರ ಅಯನ' ಎಂಬಲ್ಲಿ ಅಯನಶಬ್ದ ಲ್ಯುಟ್ ಪ್ರತ್ಯಯಾಂತ, ನಪುಂಸಕವಾಗಬೇಕು. ಈ ಸಮಸ್ಯೆಗೆ ಪರಿಹಾರ - ಕರಣ ಅಧಿಕರಣ ಅರ್ಥಗಳಲ್ಲಿ ಲ್ಯುಟ್ ವಿಧಾಯಕವಾದ ಸೂತ್ರದಲ್ಲಿ 'ನಪುಂಸಕೇ' ಎಂದು ಅನುವೃತ್ತಿ ಇಲ್ಲ ಎಂದು ಒಂದು ಪರಿಹಾರ. 'ಲ್ಯುಟ್' ಎಂಬಲ್ಲಿ ಟಕಾರ ಇತ್ ಏಕೆ? 'ರಾಜಧಾನೀ' ಎಂದು ಮುಂತಾಗಿ ಸ್ತ್ರೀಲಿಂಗ ಪ್ರತ್ಯಯ ಬರುವುದಕ್ಕಾಗಿ ಎನ್ನಬೇಕು. ಆಗ ನಪುಸಂಕಲಿಂಗ ನಿಯಮವಿಲ್ಲವೆಂದು ಹೇಳಿದಂತಾಯಿತು. ಆದರಿಂದಲೆ ಭಾಷ್ಯಕಾರನೂ 'ಅನುಮಾನ' ಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿದ್ದಾನೆ. ಇದು ಇನ್ನೊಂದು ಪರಿಹಾರ. 'ಕೃತ್ಯಲ್ಯುಟೋ ಬಹುಲಂ' ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಲ್ಯುಟ್ ಪ್ರತ್ಯಯಾಂತ ಶಬ್ದಕ್ಕೆ ಲೋಕರೂಢಿಗನುಸಾರ ಯಾವ ಲಿಂಗವನ್ನೂ ಇಟ್ಟುಕೊಳ್ಳಬಹುದೆಂದಿದೆ ಎಂದು ಮತ್ತೊಂದು ಪರಿಹಾರ.

## ಗುರುದೇವತಾ ನಮಸ್ಕಾರ

ಶಿಷ್ಯರು ಮುಂದೆ ಗ್ರಂಥ ರಚನೆ ಮಾಡುವಾಗ ಗುರುದೇವತಾ ನಮಸ್ಕಾರ ಮಾಡಬೇಕು. ಗ್ರಂಥದ ವಿಷಯ ಪ್ರಯೋಜನಾದಿಗಳನ್ನು ಸ್ಮರಿಸಿ ಮೋಕ್ಷಾದಿ ಮಹಾಫಲಭಾಗಿಗಳಾಗಬೇಕು ಎಂಬ ಉದ್ದೇಶದಿಂದ ಶ್ರೀಮದಾಚಾರ್ಯರು ನಮಸ್ಕಾರವನ್ನೂ ವಿಷಯಪ್ರಯೋಜನಾದಿಗಳನ್ನೂ ಹೇಳಿದ್ದಾರೆ.

# ತತ್ವಪ್ರಕಾಶಿಕಾ - ಭಾವದೀಪ

# ಸಾರಾಂಶ

## ಜಿಜ್ಞಾಸಾಧಿಕರಣ

**ಲಕ್ಷ್ಮೀನಾರಾಯಣಂ ನತ್ವಾ ಪೂರ್ಣಬೋಧಾನ್ ಗುರೂನಪಿ ।**
**ತತ್ವಪ್ರಕಾಶಿಕಾಭಾವದೀಪಂ ಕುರ್ಯಾಂ ಯಥಾಮತಿ ॥**

ಲಕ್ಷ್ಮೀನಾರಾಯಣನನ್ನು ನಮಸ್ಕರಿಸಿ, ಗುರುಗಳಾದ ಪೂರ್ಣಪ್ರಜ್ಞರನ್ನೂ ಸಹ ನಮಿಸಿ, ತತ್ವಪ್ರಕಾಶಿಕಾಗ್ರಂಥಕ್ಕೆ ಬುದ್ಧಿಗೆ ನಿಲುಕಿದಷ್ಟು ''ಭಾವದೀಪ'' ಎಂಬ ವ್ಯಾಖ್ಯಾನವನ್ನು ರಚಿಸುತ್ತಿದ್ದೇವೆ.

**ತತ್ವಪ್ರಕಾಶಿಕಾಽಽಕೂತಂ ಚಂದ್ರಿಕಾತಃಪ್ರಕಾಶಿತಮ್ ।**
**ಅಪಿ ಮಂದಕೃತೇ ಸರ್ವವಿಷಯಾ ಚ ಕೃತಿರ್ಮಮ ॥**

ವಸ್ತುತಃ ತತ್ವಪ್ರಕಾಶಿಕೆಯ ಅಭಿಪ್ರಾಯವನ್ನು ಚಂದ್ರಿಕೆಯಲ್ಲೇ ಸ್ಪಷ್ಟಪಡಿಸಿದ್ದಾರೆ. ಆದರೂ ಪ್ರತಿಪಂಕ್ತಿಗಳ ಅರ್ಥವನ್ನು ನಿರೂಪಿಸುವುದಕ್ಕಾಗಿ ಈ ಕೃತಿಯು ಹೊರಟಿದೆ. ಮಂದಜನರಿಗೆ ಉಪಯೋಗವಾಗಬೇಕೆಂಬುದೇ ಇದರ ಉದ್ದೇಶ.

**ನೂತನೈರುದಿತಾ ಯೇ ತೇ ದೋಷಾಸ್ತೇಷಾಮಲಗ್ನತಾಮ್ ।**
**ಸಂಪ್ರದರ್ಶಯಿತುಂ ಚಾಽತಃ ಪ್ರಸನ್ನಾಃ ಸಂತು ಸಜ್ಜನಾಃ ॥**

ತತ್ವಪ್ರಕಾಶಿಕಾಗ್ರಂಥದ ಮೇಲೆ ಹೊಸದಾಗಿ ಮಾಡಲ್ಪಟ್ಟ ಎಲ್ಲ ಆಕ್ಷೇಪಗಳನ್ನು ನಿರಾಕರಿಸುವುದು ಈ ಕೃತಿಯ ಮತ್ತೊಂದು ಉದ್ದೇಶ. ಇದರಿಂದ ಸಜ್ಜನರೆಲ್ಲರೂ ಸಂತುಷ್ಟರಾಗಲಿ.

ಟೀಕಾಕೃತ್ಪಾದರ ಮೊದಲ ಮಂಗಲಪದ್ಯ ಭಾಷ್ಯದ ಮಂಗಲಪದ್ಯಕ್ಕೆ ವ್ಯಾಖ್ಯಾನ ರೂಪವಾಗಿದೆ. ಆದರಂತೆಯೇ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವಾಗಿದೆ. ಮುಂದೆ ಸೂತ್ರಕಾರರಿಗೂ ಭಾಷ್ಯಕಾರರಿಗೂ ನಮಿಸಿ ಭಾಷ್ಯಕ್ಕೆ ಟೀಕೆ ರಚಿಸಲು ಸಂಕಲ್ಪಿಸುತ್ತಾರೆ. ಅದರಿಂದ ವಾಕ್‌ಶುದ್ಧಿಯಾಗಲಿ ಎನ್ನುತ್ತಾರೆ ಟೀಕಾಕೃತ್ಪಾದರು.

### ಟೀಕೆಯ ಮೊದಲ ಅಥಶಬ್ದ

ಸಮಗ್ರ ಗ್ರಂಥದ ವ್ಯಾಖ್ಯಾನವನ್ನು ಸಂಕ್ಷೇಪವಾಗಿ ಮಂಗಲಪದ್ಯದಲ್ಲಿ ಮಾಡಿ ಮುಂದೆ ಭಾಷ್ಯದ ಪ್ರತಿವಾಕ್ಯ ಪ್ರತಿಪದಗಳ ವ್ಯಾಖ್ಯಾನ ಪ್ರಾರಂಭಿಸುತ್ತಿದ್ದೇವೆ ಎನ್ನುತ್ತಿದ್ದಾರೆ, ಅಥಶಬ್ದದಿಂದ.

## ನಾರಾಯಣ ಶಬ್ದಾರ್ಥ

ನಾರಾಯಣನೆ ಬ್ರಹ್ಮಸೂತ್ರ ಪ್ರತಿಪಾದ್ಯನೆಂದು ಸೂಚಿಸಲು ಭಾಷ್ಯದಲ್ಲಿರುವ ನಾರಾಯಣಶಬ್ದ ಬ್ರಹ್ಮಶಬ್ದ ಸಮಾನಾರ್ಥಕವೆಂದೂ ಬ್ರಹ್ಮಸೂತ್ರದ ನಾಲ್ಕು ಅಧ್ಯಾಯಗಳ ಸಾರರೂಪವೆಂದೂ ಟೀಕಾಕೃತ್ಪಾದರು ಹೇಳುತ್ತಾರೆ. 'ನಾರ'ವೆಂದರೆ ಅಮೃತತ್ವಕ್ಕೆ ಮೋಕ್ಷಕ್ಕೆ ಸಾಧನವಾದ ತತ್ವಜ್ಞಾನ. ಅಥವಾ ನಿರ್ದುಃಖವಾದ ಸ್ಥಾನಕ್ಕೆ ಒಯ್ಯುವ ತತ್ವಜ್ಞಾನ. ಅಥವಾ ನಿರ್ದೋಷ ವೇದೋತ್ಪನ್ನವಾದ ತತ್ವಜ್ಞಾನ. ಇಂಥ ತತ್ವಜ್ಞಾನಕ್ಕೆ ವಿಷಯನಾಗಿ ಆಶ್ರಯನೆನಿಸಿದವನು ನಾರಾಯಣ. ಇಲ್ಲಿ 'ನಾರ'ವೆಂದರೆ ನಿರ್ದೋಷವಾದ ವೇದ. ಅದರಿಂದ ಬರುವ ಜ್ಞಾನವೂ 'ನಾರ'. ಅಣ್ ಪ್ರತ್ಯಯ ಸೇರಿಸಬೇಕು. ಛ ಪ್ರತ್ಯಯ ಬಂದು ನಾರೀಯ ಎಂದಾದೀತು ಎಂಬ ಸಮಸ್ಯೆಗೆ ಪರಿಹಾರವಿದೆ.

## ನಾರಾಯಣ ಶಬ್ದದಲ್ಲಿ ನಲೋಪಾಭಾವ

ದೋಷದೂರ ಎಂಬ ಅರ್ಥದಲ್ಲಿ 'ನ ಅರಾಯನ'ವು 'ನಾರಾಯಣ' ಎಂದಾಗುವುದು. ಆದರೆ ಇಲ್ಲಿ ನಲೋಪ ಬಂದೀತು. 'ನ ಆರೋಗ್ಯ' 'ಅನಾರೋಗ್ಯ'ವಾಗುವಂತೆ 'ನ ಅರಾಯನ'ವು 'ಅನರಾಯಣ' ಏಕಾಗುವುದಿಲ್ಲ? ಇದಕ್ಕೆ ಪರಿಹಾರ - 'ನಲೋಪವನ್ನು ಹೇಳುವ ಸೂತ್ರದಲ್ಲಿ ವಿಕಲ್ಪವನ್ನು ಹೇಳುವ 'ವಿಭಾಷಾ' ಪದದ ಅನುವೃತ್ತಿ ಇದೆ ಎಂದು ನ್ಯಾಸಗ್ರಂಥದಲ್ಲಿ ಹೇಳಿದೆ' ಎಂದು ಹೇಳಬಹುದು. ವಸ್ತುತಃ ಅನುವೃತ್ತಿ ಬೇಡ. ಅದರಿಂದ ಇಲ್ಲಿ 'ನ ಅರಾಯನ' ಎಂಬಲ್ಲಿ 'ನಞ್' ಎಂಬ ಅವ್ಯಯವಲ್ಲ. 'ನ' ಎಂಬ ಅವ್ಯಯ ಎಂದಿಟ್ಟುಕೊಳ್ಳಬೇಕು.

## ನಾರಾಯಣ ಶಬ್ದದಲ್ಲಿ ಣತ್ವ

ರೇಫದ ಮುಂದೆ ಬರುವ ನಕಾರಕ್ಕೆ ಣಕಾರ ಬರುವುದು ಸಾಮಾನ್ಯವಾಗಿ ಅವೆರಡೂ ಒಂದು ಅಖಂಡಪದದಲ್ಲಿ ಬಂದಾಗ ಮಾತ್ರ. ಪ್ರಕೃತದಲ್ಲಿ 'ನಾರ ಅಯನ' ಎಂದು ಎರಡು ಪದ ಸೇರಿ ಒಂದಾಗಿದೆ. ಅಖಂಡವಲ್ಲ. ಆದರೂ ರೂಢಿಯ ಹೆಸರುಗಳಲ್ಲಿ ಈ ನಿಯಮವಿಲ್ಲ. ಅದರಿಂದ ಣತ್ವ ಬರಬಹುದು. 'ಶೂರ್ಪ ನಖಾ' ಶೂರ್ಪಣಖಾ ಎಂದಾಗುತ್ತದೆ. ಹಾಗೇ ಇದು.

## ನಾರಾಯಣ ಶಬ್ದದ ಪುಲ್ಲಿಂಗ

'ನಾರ ಅಯನ' ಎಂಬಲ್ಲಿ ಅಯನಶಬ್ದ ಲ್ಯುಟ್ ಪ್ರತ್ಯಯಾಂತ, ನಪುಂಸಕವಾಗಬೇಕು. ಈ ಸಮಸ್ಯೆಗೆ ಪರಿಹಾರ - ಕರಣ ಅಧಿಕರಣ ಅರ್ಥಗಳಲ್ಲಿ ಲ್ಯುಟ್ ವಿಧಾಯಕವಾದ ಸೂತ್ರದಲ್ಲಿ 'ನಪುಂಸಕೇ' ಎಂದು ಅನುವೃತ್ತಿ ಇಲ್ಲ ಎಂದು ಒಂದು ಪರಿಹಾರ. 'ಲ್ಯುಟ್' ಎಂಬಲ್ಲಿ ಟಕಾರ ಇತ್ ಏಕೆ? 'ರಾಜಧಾನೀ' ಎಂದು ಮುಂತಾಗಿ ಸ್ತ್ರೀಲಿಂಗ ಪ್ರತ್ಯಯ ಬರುವುದಕ್ಕಾಗಿ ಎನ್ನಬೇಕು. ಆಗ ನಪುಸಂಕಲಿಂಗ ನಿಯಮವಿಲ್ಲವೆಂದು ಹೇಳಿದಂತಾಯಿತು. ಅದರಿಂದಲೆ ಭಾಷ್ಯಕಾರನೂ 'ಅನುಮಾನ' ಶಬ್ದವನ್ನು ಪುಲ್ಲಿಂಗದಲ್ಲಿ ಪ್ರಯೋಗಿಸಿದ್ದಾನೆ. ಇದು ಇನ್ನೊಂದು ಪರಿಹಾರ. 'ಕೃತ್ಯಲ್ಯುಟೋ ಬಹುಲಂ' ಎಂಬ ಸೂತ್ರದಲ್ಲಿ ಸ್ಪಷ್ಟವಾಗಿ ಲ್ಯುಟ್ ಪ್ರತ್ಯಯಾಂತ ಶಬ್ದಕ್ಕೆ ಲೋಕರೂಢಿಗನುಸಾರ ಯಾವ ಲಿಂಗವನ್ನೂ ಇಟ್ಟುಕೊಳ್ಳಬಹುದೆಂದಿದೆ ಎಂದು ಮತ್ತೊಂದು ಪರಿಹಾರ.

## ಗುರುದೇವತಾ ನಮಸ್ಕಾರ

ಶಿಷ್ಯರು ಮುಂದೆ ಗ್ರಂಥ ರಚನೆ ಮಾಡುವಾಗ ಗುರುದೇವತಾ ನಮಸ್ಕಾರ ಮಾಡಬೇಕು. ಗ್ರಂಥದ ವಿಷಯ ಪ್ರಯೋಜನಾದಿಗಳನ್ನು ಸ್ಮರಿಸಿ ಮೋಕ್ಷಾದಿ ಮಹಾಫಲಭಾಗಿಗಳಾಗಬೇಕು ಎಂಬ ಉದ್ದೇಶದಿಂದ ಶ್ರೀಮದಾಚಾರ್ಯರು ನಮಸ್ಕಾರವನ್ನೂ ವಿಷಯಪ್ರಯೋಜನಾದಿಗಳನ್ನೂ ಹೇಳಿದ್ದಾರೆ.

## ಬ್ರಹ್ಮಸೂತ್ರದ ಹಿರಿಮೆ

ಮೋಕ್ಷ ಸಂಪಾದನೆಗಾಗಿ ಅಧ್ಯಯನ ಮಾಡಬೇಕಾಗಿರುವ ಗ್ರಂಥ ಬ್ರಹ್ಮಸೂತ್ರ. ಅದರಿಂದ ಅದು ವಾಸ್ತವವಿಷಯಗಳನ್ನೇ ಹೇಳುತ್ತದೆ. ಗ್ರಂಥಕಾರರಾದ ಬಾದರಾಯಣರೂ ಸ್ವತಃ ಸರ್ವಜ್ಞರು. ಅವತರಿಸಿದೊಡನೆಯೆ, ಗುರುಕುಲದಲ್ಲಿ ವಿದ್ಯಾಭ್ಯಾಸ ಮಾಡದೆಯೆ, ಗ್ರಂಥರಚನೆ ಮಾಡಿದ್ದಾರೆ.

## ಸೂತ್ರಲಕ್ಷಣ

ಸೂತ್ರಲಕ್ಷಣಗಳಲ್ಲಿ ಮುಖ್ಯವಾದ ಅಲ್ಪಾಕ್ಷರತ್ವ ವಿಶ್ವತೋಮುಖತ್ವಗಳನ್ನೂ ಅಸ್ತೋಭತ್ವವನ್ನೂ ಸ್ಪಷ್ಟಗೊಳಿಸಲಾಗಿದೆ. ಬ್ರಹ್ಮಸೂತ್ರದಲ್ಲಿಯೆ ಎಲ್ಲ ಸೂತ್ರಲಕ್ಷಣಗಳೂ ಪುಷ್ಕಲವಾಗಿ ಬರುವುದರಿಂದ ಅದೇ ಮುಖ್ಯವಾಗಿ 'ಸೂತ್ರ' ಎನಿಸುತ್ತದೆ. ಅದರಿಂದ 'ಸೂತ್ರ' ಎಂದರೆ ಬ್ರಹ್ಮಸೂತ್ರವೆ. ಬೇರೆ ಸೂತ್ರಗಳಿಗೆ ಜೈಮಿನಿಸೂತ್ರ ಪಾಣಿನಿಸೂತ್ರ ಎಂದು ಮುಂತಾಗಿ ವಿಶೇಷಣ ಕೊಟ್ಟೇ ಹೇಳಬೇಕಾಗುತ್ತದೆ.

## ಜಿಜ್ಞಾಸಾಧಿಕರಣದ ಸಂಗತಿ

ಬ್ರಹ್ಮವಿಚಾರವು ಶಾಸ್ತ್ರದಲ್ಲಿ ನಡೆಯಬೇಕಾದರೆ ಅದರ ಅವಶ್ಯಕತೆಯನ್ನು ಮೊದಲಿಗೆ ಸೂತ್ರ ಸಮರ್ಥಿಸುವುದರಿಂದ ಶಾಸ್ತ್ರದ ಉಪೋದ್ಘಾತ ಸಂಗತಿ ಇದೆ. ಆದರೆ ಪ್ರಥಮಾಧ್ಯಾಯ ಪ್ರಥಮ ಪಾದಗಳ ಸಂಗತಿಗಳಿಲ್ಲ. ಈ ಸೂತ್ರದ ಬಲದಿಂದಲೆ ಪ್ರಥಮಾಧ್ಯಾಯ ಪ್ರಥಮ ಪಾದಗಳು ಪ್ರವೃತ್ತಿ ಮಾಡುವುದು ನಿಜವೆ. ಆದರೆ ಕ್ರಮವಾಗಿ ನಾಲ್ಕು ಪಾದಗಳೂ ಆ ಮೂಲಕ ನಾಲ್ಕು ಅಧ್ಯಾಯಗಳೂ ಈ ಸೂತ್ರದ ಬಲದಿಂದಲೆ ಪ್ರವೃತ್ತಿ ಮಾಡುವುದರಿಂದ ಪ್ರತ್ಯೇಕವಾಗಿ ಪ್ರಥಮಾಧ್ಯಾಯ ಪ್ರಥಮಪಾದಗಳ ಸಂಗತಿಗಳಿಲ್ಲ.

ಬ್ರಹ್ಮವಿಚಾರ ವಿಧಾಯಕ ವಾಕ್ಯದ ಅರ್ಥನಿರ್ಣಯಕ್ಕೆ ಯುಕ್ತಿಯನ್ನು ಹೇಳುವ ಮೂಲಕ ಈ ಸೂತ್ರ ಬ್ರಹ್ಮವಿಚಾರವೆನಿಸುವುದರಿಂದ ಬ್ರಹ್ಮವಿಚಾರರೂಪವಾದ ಶಾಸ್ತ್ರದ ಅಂತರ್ಭಾವ ಸಂಗತಿಯೂ ಈ ಸೂತ್ರಕ್ಕೆ ಇದೆ.

## ಜಿಜ್ಞಾಸಾಧಿಕರಣದ ವಿಷಯ ಮತ್ತು ಸಂದೇಹ

ಜಿಜ್ಞಾಸಾಧಿಕರಣಕ್ಕೆ ವಿಚಾರಶಾಸ್ತ್ರವೆ ವಿಷಯ. ಅದು ಬೇಕೆ ಬೇಡವೆ ಎಂದು ಸಂದೇಹ. ಏಕೆಂದರೆ ಬ್ರಹ್ಮ ಜೀವನಿಗಿಂತ ಬೇರಲ್ಲವಾದರೆ ಅವನು ಅನುಭವವೇದ್ಯನಾಗಿರುವುದರಿಂದ ವಿಚಾರ ಬೇಡ, ವಿಚಾರಶಾಸ್ತ್ರವೂ ಬೇಡ. ಬ್ರಹ್ಮ ಜೀವನಿಗಿಂತ ಬೇರೆಯೆಂದಾದರೆ ಅನುಭವವೇದ್ಯನಾದ ಜೀವನ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲದಿದ್ದರೂ ಬ್ರಹ್ಮ ವಿಚಾರಯೋಗ್ಯನೆನಿಸಬಹುದು. ವಿಚಾರಶಾಸ್ತ್ರಬೇಕೆನ್ನಬಹುದು. ವಿಷಯದ ಬಗ್ಗೆ ಸಂದೇಹದಂತೆ ಪ್ರಯೋಜನದ ಬಗ್ಗೆಯೂ ಸಂದೇಹವನ್ನು ಹೇಳಬಹುದು. ಮೋಕ್ಷ ಕರ್ಮಸಾಧ್ಯವೆ, ಜ್ಞಾನಸಾಧ್ಯವೆ? ಕರ್ಮಸಾಧ್ಯವಾದರೆ ಜ್ಞಾನಕ್ಕಾಗಿ ವಿಚಾರ ಮಾಡಬೇಕಾಗಿಲ್ಲ, ಶಾಸ್ತ್ರ ಬೇಡ. ಜ್ಞಾನಸಾಧ್ಯವೆಂದಾದರೆ ಜ್ಞಾನಕ್ಕಾಗಿ ವಿಚಾರ ಬೇಕು, ಶಾಸ್ತ್ರ ಬೇಕು ಎಂದು. ಆದರೆ ಈ ಸಂದೇಹವನ್ನು ತೋರಿಸದಿರಲು ಅನೇಕ ಕಾರಣಗಳಿವೆ. ವಿಷಯ ಸಂದೇಹವನ್ನು ತೋರಿಸಿದ್ದರಿಂದಲೆ ಪ್ರಯೋಜನ ಸಂದೇಹವನ್ನೂ ತೋರಿಸಿದಂತಾಯಿತು. ಅಥವಾ ಮುಂದೆ ವಿದ್ಯಾಧಿಕರಣದಲ್ಲಿ ಇದರ ಬಗ್ಗೆ ವಿಚಾರವಿರುವುದರಿಂದ ಇಲ್ಲಿ ಕೈಬಿಡಲಾಗಿದೆ. ಅಥವಾ ಕರ್ಮದಿಂದ ಮೋಕ್ಷಲಭ್ಯವೆನ್ನುವ ಪಕ್ಷದಲ್ಲಿ ಹೇಗೆ ವಿಚಾರ ವ್ಯರ್ಥವೋ ಹಾಗೆಯೆ ಜ್ಞಾನದಿಂದ ಲಭ್ಯವೆನ್ನುವ ಪಕ್ಷದಲ್ಲಿಯೂ ವ್ಯರ್ಥವೆ. ಏಕೆಂದರೆ ಮುಂದೆ ಹೇಳುವಂತೆ ಜ್ಞಾನವಿದ್ದರೂ ಮೋಕ್ಷ ಲಭಿಸಬೇಕಿಲ್ಲ. ಆದ್ದರಿಂದ ಸಂದೇಹವೆ ಅನುಚಿತ. ವಸ್ತುತಃ ಸೂತ್ರದ ಬ್ರಹ್ಮಶಬ್ದದಿಂದ

ನಿವಾರಣೆಯಾಗುವುದು ಈ ವಿಷಯಾಭಾವಪೂರ್ವಪಕ್ಷ ಅತಃಶಬ್ದದಿಂದ ನಿವಾರಣೆಯಾಗುವ ಪ್ರಯೋಜನಾಭಾವ ಪೂರ್ವಪಕ್ಷ ಈಗ ಅಪ್ರಸಕ್ತ ಎಂದು ಪ್ರಯೋಜನ ಸಂದೇಹವನ್ನು ತೋರಿಸಿಲ್ಲ.

## ಜಿಜ್ಞಾಸಾಧಿಕರಣ ಪೂರ್ವಪಕ್ಷ-ಅದ್ವೈತಿರೀತಿಯಿಂದ

ಸೂತ್ರದ ಬ್ರಹ್ಮಶಬ್ದಕ್ಕೆ ಬ್ರಹ್ಮನು ಗುಣಪೂರ್ಣನಾದ್ದರಿಂದ ಜೀವನಿಗಿಂತ ವಿಲಕ್ಷಣ ಎಂದು ತಿಳಿಸುವ ಅಭಿಪ್ರಾಯವಿರುವುದರಿಂದ ಆ ಶಬ್ದದಿಂದ ನಿವಾರಣೆಯಾಗುವ ಪೂರ್ವಪಕ್ಷವನ್ನು ಹೇಳಬೇಕು -

ವೇದದಲ್ಲಿ ಕರ್ಮಕಾಂಡ ಕರ್ಮವನ್ನು ಹೇಳಲು ಹೊರಟಿದೆ. ವೇದಾಂತಕ್ಕೆ ಅದ್ವೈತಿಗಳು ಹೇಳಿದಂತೆ ಉಪಕ್ರಮಾದಿ ಲಿಂಗಗಳಿಂದ ನಿರ್ಧರ್ಮಕ ಚೈತನ್ಯವನ್ನು ಹೇಳುವ ಅಭಿಪ್ರಾಯ ಮೇಲುನೋಟಕ್ಕೆ ಕಾಣುತ್ತದೆ. ಹೀಗಾಗಿ ಜೀವನಿಗಿಂತ ಬೇರೆ ಗುಣಪೂರ್ಣ ಬ್ರಹ್ಮನಿಲ್ಲ. ಜೀವ ಸ್ವಪ್ರಕಾಶನಾಗಿ ಸಿದ್ಧನಾಗಿದ್ದಾನೆ. ಆತ್ಮನಿಗಿಂತ ಬೇರೆ ಯಾವುದೂ ಸತ್ಯವಲ್ಲ. ಶಾಸ್ತ್ರವೇದ್ಯವೂ ಅಲ್ಲ. ಸತ್ಯವಲ್ಲದ್ದು ಶಾಸ್ತ್ರವೇದ್ಯವಾದರೆ ಶಾಸ್ತ್ರ ಅಪ್ರಮಾಣವಾದೀತು. ವೇದಾಂತವೇದ್ಯವಾದ ಶುದ್ಧಚೈತನ್ಯ ಅನುಭವದಲ್ಲಿ ಅವೇದ್ಯ ಎನ್ನುವ ವಾದವನ್ನು ಹಿಂದೆಯೆ ನಿರಾಕರಿಸಲಾಗಿದೆ. ವೇದ್ಯವೆ ಆದರೂ ಅವಿದ್ಯೆಯ ಪ್ರಭಾವದಿಂದ ಅವೇದ್ಯವೂ ಹೌದೆನ್ನುವುದನ್ನೂ ಹಿಂದೆ ನಿರಾಕರಿಸಲಾಗಿದೆ. ಪ್ರತ್ಯಕ್ಷ ವಿರೋಧವಿರುವಾಗ ವೇದಾಂತ ಶುದ್ಧ ಚೈತನ್ಯವನ್ನು ಹೇಗೆ ಹೇಳುತ್ತದೆ ಎಂದರೆ ಅದ್ವೈತಿ ರೀತಿಯಿಂದ ಪ್ರತ್ಯಕ್ಷ ದುರ್ಬಲ.

ನ್ಯಾಯವಿವರಣಾನುಸಾರವಾಗಿ ಇಲ್ಲಿ ಟೀಕೆ ಹೀಗೆ ಹೇಳಿದೆ. ಸುಧೆಯಲ್ಲಿ ಯಾವ ರೀತಿಯಿಂದ ನೋಡಿದರೂ ವಿಚಾರ ಅನಾವಶ್ಯಕವೆನ್ನಲು ಪ್ರತ್ಯಕ್ಷ ವಿರುದ್ಧವಾಗಿ ಶ್ರುತಿ ಏನು ಹೇಳಿದರೂ ಅದು ನಿರರ್ಥಕ, ವಿಚಾರಕ್ಕೇ ಅಯೋಗ್ಯವೆಂದು ಪೂರ್ವಪಕ್ಷವಿದೆ.

## ಆತ್ಮಸ್ವಪ್ರಕಾಶ

'ನಾನು' ಎಂಬುದು ತಾರ್ಕಿಕರು ಹೇಳುವಂತೆ ಮಾನಸಾನುಭವವೆಂದರೆ ಅದು ಇನ್ನೊಂದು ಮಾನಸಾನುಭವಕ್ಕೆ ವೇದ್ಯ ಅದೂ ಮತ್ತೊಂದಕ್ಕೆ ಎಂದು ಅನವಸ್ಥೆ. ಜಿಜ್ಞಾಸೆ ಬಂದರೆ ಮಾತ್ರ ಜ್ಞಾನಗೋಚರವಾಗಬೇಕು. ಇಲ್ಲದಿದ್ದರೆ ಇಲ್ಲ, ಅನವಸ್ಥೆ ಇಲ್ಲ ಎನ್ನಕೂಡದು. ಜ್ಞಾನಗೋಚರವಾಗದ ಜ್ಞಾನ ಒಂದರ ಅಸ್ತಿತ್ವದಲ್ಲಿ ಏನು ಪ್ರಮಾಣ? ಆದರಿಂದ 'ನಾನು' ಎಂಬುದು ಸ್ವಪ್ರಕಾಶಾತ್ಮಾನುಭವವೆನ್ನಬೇಕು. ಪ್ರಾಭಾಕರರ ಪ್ರಕಾರ ಜ್ಞಾನ ಸ್ವಪ್ರಕಾಶ. ಆತ್ಮನಲ್ಲ. ಜ್ಞಾನ ತನ್ನನ್ನು ತಾನು ಕಾಣುವಾಗ ತನಗೆ ಆಶ್ರಯನಾದ ಆತ್ಮನನ್ನೂ ಕಾಣುತ್ತದೆ ಎನ್ನುತ್ತಾರೆ. ಆದರೆ ನಿದ್ದೆಯಲ್ಲಿಯೂ 'ನಾನು' ಎಂಬ ಜ್ಞಾನವಿದೆ. ಅದು ಮಾನಸಜ್ಞಾನವಲ್ಲ. ಆಗಲೂ ಮಾನಸಜ್ಞಾನವಿದ್ದರೆ ಅದು ನಿದ್ದೆಯೆ ಅಲ್ಲ. ನಿದ್ದೆಯಿಂದ ಎದ್ದಾಗ ನಾನು ಇಷ್ಟು ಹೊತ್ತು ಸುಖವಾಗಿ ನಿದ್ದೆ ಮಾಡಿದ್ದೇನೆ ಎಂದು ನಮ್ಮ ನಿದ್ದೆಯನ್ನು ನಾವು ನೆನೆಯುವುದರಿಂದ ನಿದ್ದೆಯಲ್ಲಿ ಆತ್ಮಾನುಭವವಿದೆ. ಅದು ಸ್ವಪ್ರಕಾಶ. ಆತ್ಮನ ಬಗ್ಗೆ ಸಂದೇಹಕ್ಕೆ ಅವಕಾಶವಿಲ್ಲವೆನ್ನಲು ಯಾವುದಾದರೊಂದು ಬಗೆಯಿಂದ ಆತ್ಮನು ಪ್ರಕಾಶನೆಂದಾದರೆ ಸಾಕು. ವಸ್ತುಸ್ಥಿತಿ ಆತ ಸ್ವಪ್ರಕಾಶನೆಂದು.

## ಪೂರ್ವಪಕ್ಷ ಪ್ರಾಭಾಕರ ರೀತಿಯಿಂದಲ್ಲ

ಪ್ರಾಭಾಕರ ರೀತಿಯಿಂದ ಪೂರ್ವಪಕ್ಷವೆಂದರೆ ನ್ಯಾಯವಿವರಣ ವಿರೋಧ. ಅಲ್ಲಿ ಆತ್ಮ ಸ್ವಪ್ರಕಾಶ ಎಂದಿದೆ. ಅದು ವಸ್ತುಸ್ಥಿತಿಯ ಅಭಿಪ್ರಾಯದಿಂದ ಹೇಳಿದ್ದೆಂದರೂ ಪ್ರಾಭಾಕರ ರೀತಿಯಿಂದ ಪೂರ್ವಪಕ್ಷ ಮಾಡುವುದಾದರೆ ಜೀವಸ್ವರೂಪದ ಬಗ್ಗೆ ಸಂದೇಹವಿಲ್ಲದಿದ್ದರೂ ಶರೀರಾದಿ ವಿಲಕ್ಷಣತ್ವದಂಥ ಸತ್ಯವಸ್ತುಗಳು ವಿಚಾರ ವಿಷಯವಾಗುವ

ಸಂಭವವಿದೆ. ಜೀವ ಆನಂದರೂಪನೆ ಅಲ್ಲವೆ? ಜ್ಞಾನರೂಪನೆ ಅಲ್ಲವೆ, ಅಣುವೆ, ಮಹತ್ತೆ ಎಂದು ಮುಂತಾಗಿ ವಿಚಾರ ಶಕ್ಯವಿದೆ. ವೇದವೆಲ್ಲ ಕಾರ್ಯಪರವಾದ್ದರಿಂದ ಜೀವವಿಲಕ್ಷಣನಾದ ಬ್ರಹ್ಮನ ವಿಷಯದಲ್ಲಿ ಯಾವ ಪ್ರಮಾಣವೂ ಇಲ್ಲ ಎಂಬ ಅಂಶದಲ್ಲಿ ಪ್ರಾಭಾಕರ ರೀತಿ. ಶರೀರಾದಿ ವಿಲಕ್ಷಣತ್ವಾದಿ ವಿಷಯದಲ್ಲಿ ಅವು ಸತ್ಯವಲ್ಲ, ತತ್ತ್ವಾವೇದಕವಾದ ವೇದಾಂತದಲ್ಲಿ ಅವುಗಳ ವಿಚಾರ ಶಕ್ಯವಿಲ್ಲವೆಂದು ಅದ್ವೈತರೀತಿ ಎಂದರೆ ಅರ್ಧಚರತೀಯ ನ್ಯಾಯವಾಗುತ್ತದೆ.

ಸುಧೆಯಲ್ಲಿ ಕಾರ್ಯಪರತ್ವ ಪೂರ್ವಪಕ್ಷವಿದೆ. ಆದರೆ ಅದು ಸೂತ್ರದ ಅತಃಶಬ್ದದಿಂದ ಪರಿಹಾರವಾಗುವ ಬೇರೆಯೆ ಒಂದು ಪೂರ್ವಪಕ್ಷ. ಪ್ರಕೃತ ಟೀಕೆಯಲ್ಲಿ ನ್ಯಾಯವಿವರಣಕ್ಕೆ ಅನುಸಾರವಾಗಿ ಬ್ರಹ್ಮಶಬ್ದದಿಂದ ಪರಿಹಾರವಾಗುವ ಪೂರ್ವಪಕ್ಷವನ್ನು ತೋರಿಸಲಾಗಿದೆ. ಏಕೆಂದರೆ ಬ್ರಹ್ಮಶಬ್ದ ಅದ್ವೈತಿಗಳು ಹೇಳುವ ಜೀವಬ್ರಹ್ಮೈಕ್ಯಕ್ಕೆ ವಿರೋಧಿ.

## ಪೂರ್ವಪಕ್ಷ ಪೂರ್ತಿ ಅದ್ವೈತ ರೀತಿಯಲ್ಲ

'ಸ್ವಪ್ರಕಾಶ ಶುದ್ಧ ಆತ್ಮಸ್ವರೂಪ ಸಿದ್ಧವಾಗಿರುವುದರಿಂದ ಅದನ್ನು ವರ್ಣಿಸುವ ವೇದಾಂತ ಅನುವಾದಕ' ವೆನ್ನುವುದು ಅದ್ವೈತ ರೀತಿಯಲ್ಲ. ಅದ್ವೈತಿಗಳು ಅದನ್ನು ಒಪ್ಪಿದರೆ ಅವರ ಜಿಜ್ಞಾಸಾಧಿಕರಣಸಿದ್ಧಾಂತ ಹೊರಡಲಾರದು. ಸ್ವಪ್ರಕಾಶ ಎಂದರೆ ಅದ್ವೈತದಲ್ಲಿ ಕರ್ತೃಕರ್ಮ-ವಿರೋಧಭಯದಿಂದ ಅವೇದ್ಯ ಎಂದು ಅರ್ಥ ಹೇಳುತ್ತಾರೆ. ಅದರಿಂದ ವೇದಾಂತವು ಅಖಂಡ ಆತ್ಮಸ್ವರೂಪ ಮಾತ್ರ ಪರ ಎಂಬ ವಿಷಯದಲ್ಲಿ ಮಾತ್ರ ಅದ್ವೈತರೀತಿ. ಆತ್ಮನಿಗೆ ಸ್ವಪ್ರಕಾಶಾನು- ಭವಸಿದ್ಧತ್ವವು ಸಿದ್ಧಾಂತರೀತಿಯಿಂದ.

ಅಥವಾ ಆತ್ಮ ಸ್ವಪ್ರಕಾಶಾನುಭವಕ್ಕೆ ವಿಷಯನೂ ಆಗುತ್ತಾನೆ. ಇಲ್ಲಿ 'ವಿಷಯ'ವೆಂದರೆ ಅನುಭವವನ್ನು ಮಾತಿನಲ್ಲಿ ವ್ಯಕ್ತಗೊಳಿಸಲು ನಿಮಿತ್ತವೆಂದರ್ಥ. ಆತ್ಮನೂ ಇಂಥ ವಿಷಯನೆಂದು ಅದ್ವೈತಿಗಳು ಒಪ್ಪಿದ್ದಾರೆ. ಆತ್ಮ ತನ್ನ ಸ್ವರೂಪವೆ ಆದ ಪ್ರಕಾಶಕ್ಕೆ ತಾನು ಕರ್ಮ ಎನಿಸದಿದ್ದರೂ ತನ್ನಿಂದ ಉಂಟಾಗುವ ಶಬ್ದಪ್ರಯೋಗಕ್ಕೆ ತಾನು ವಿಷಯನಾಗಲು ಯೋಗ್ಯ. ಈ ಅರ್ಥದಲ್ಲಿ ಅವನು ಸ್ವತಃಸಿದ್ಧ. ಅಂಥ ಆತ್ಮನ ಸ್ವರೂಪಭೂತವಾದ ಐಕ್ಯವನ್ನು ವೇದಾಂತವು ಬೋಧಿಸಿದರೆ ಅದು ಅನುವಾದಕವೆಂದು ಅದ್ವೈತರೀತಿಯಿಂದಲೆ ಹೇಳಲು ಬರುತ್ತದೆ.

## ಪೂರ್ವಪಕ್ಷಸಿದ್ಧಾಂತ ಸಂಕ್ಷೇಪ

ಜೀವನಿಗಿಂತ ಬೇರೆ ಈಶ್ವರ ಎಂಬುವನಿಲ್ಲ. ಜೀವ ಸ್ವಪ್ರಕಾಶನಾದ್ದರಿಂದ ವಿಚಾರ ಯೋಗ್ಯನಲ್ಲ. ಜ್ಞಾನದಿಂದ ಮೋಕ್ಷವು ಬರುತ್ತಿಲ್ಲವಾದ್ದರಿಂದ ಮೋಕ್ಷವು ಫಲವೂ ಅಲ್ಲ. ಅದರಿಂದ ವಿಚಾರಬೇಡ ಎಂದು ಪೂರ್ವಪಕ್ಷ. ಜೀವ ಅಲ್ಪಗುಣ. ಪೂರ್ಣಗುಣನಾದ ಭಗವಂತ ಬೇರೆಯೆ ಇದ್ದಾನೆ. ಅವನ ಬಗ್ಗೆ ವಿಚಾರಬೇಕು. ಅವನ ಜ್ಞಾನದಿಂದ ಮೋಕ್ಷ ಸಿಗುವುದರಿಂದ ಫಲವೂ ಇದೆ ಎಂದು ಸಿದ್ಧಾಂತ.

## ಜಿಜ್ಞಾಸಾಧಿಕರಣ ಸಿದ್ಧಾಂತ

ಬ್ರಹ್ಮಶಬ್ದವು 'ಗುಣಪೂರ್ಣ' ಎಂಬ ಅರ್ಥವನ್ನು ಕೊಡುತ್ತದೆ. 'ನಾನು' ಎಂದು ಅನುಭವದಲ್ಲಿ ಕಾಣುವ ಜೀವ 'ಅಪೂರ್ಣಗುಣ' ಎಂದೇ ಸಿದ್ಧನಾಗಿದ್ದಾನೆ. ಆದರಿಂದ ಬ್ರಹ್ಮಶಬ್ದವು ಹೇಳುವ ಗುಣಪೂರ್ಣನು ಜೀವನಿಗಿಂತ ಬೇರೆ ಎಂದು ತಿಳಿಯುತ್ತದೆ. ಅನುಭವವೂ ಜೀವನನ್ನು ಗ್ರಹಿಸುವಾಗ ಬ್ರಹ್ಮಶಬ್ದವು ಹೇಳುವ ಗುಣಪೂರ್ಣನಿಗಿಂತ ಜೀವನು ಬೇರೆ ಎಂದೇ ಗ್ರಹಿಸುತ್ತದೆ. ಬ್ರಹ್ಮಜಿಜ್ಞಾಸೆ ಮಾಡೆಂದು ಶ್ರುತಿ ವಿಧಿಸುತ್ತಿದೆ. ಬ್ರಹ್ಮ ಜಿಜ್ಞಾಸ್ಯ. ಜೀವ ಜಿಜ್ಞಾಸು. ಇವರಿಬ್ಬರೂ ಬೇರೆಯೆ ಆಗಿರಬೇಕು. 'ಜೀವ ಪರಮಾತ್ಮರು ಬೇರೆ. ಅವರ ಸ್ವಭಾವ ಬೇರೆಯಾದ್ದರಿಂದ

ನೀರು ಬೆಂಕಿಗಳಂತೆ' ಎಂದು ಅನುಮಾನವೂ ಇದೆ. ಹೀಗೆ ಬ್ರಹ್ಮ ಬೇರೆಯೆ ಇರುವುದರಿಂದ ಅವನು 'ನಾನು' ಎಂಬ ಸ್ವಪ್ರಕಾಶಾನುಭವದಲ್ಲಿ ಜೀವನಿಗೆ ಗೋಚರನಲ್ಲ. ಅವನು ನಿರ್ಗುಣ, ಎಂಟು ಗುಣಉಳ್ಳವನೆಂದು ಮುಂತಾಗಿ ವಿವಾದವೂ ಇರುವುದರಿಂದ ಸಂದೇಹವಿದೆ. ವಿಚಾರಕ್ಕೆ ಯೋಗ್ಯನೇ ಆಗಿದ್ದಾನೆ. ಪೂರ್ಣತ್ವ ಅಪೂರ್ಣತ್ವಗಳು ಅವಾಸ್ತವವಾದ್ದರಿಂದ ಭೇದವಿಲ್ಲ ಎನ್ನಬಾರದು. ಪೂರ್ಣತ್ವ ಶ್ರುತಿಸಿದ್ಧ. ಅಪೂರ್ಣತ್ವ ಸಾಕ್ಷಿವೇದ್ಯ. ಶ್ರುತಿ ಸಾಕ್ಷಿಗಳೆರಡೂ ಅನಾದಿ ನಿರ್ದೋಷ. ಅವುಗಳಿಂದ ಸಿದ್ಧವಾದುದು ಅವಾಸ್ತವವಾಗಲಾರದು.

ಸಮಸ್ತ ವೇದಾಂತವು ಉಪಕ್ರಮ ಮುಂತಾದ ಬಲವಾದ ಯುಕ್ತಿಗಳಿಂದ ಅದ್ವೈತಪರವೆಂದು ಸಿದ್ಧವಾಗಿರುವಾಗ ಒಂದು ಬ್ರಹ್ಮಶಬ್ದ ಅದಕ್ಕೆ ವಿರುದ್ಧವಾಗಿ ಗುಣಪೂರ್ಣತ್ವವನ್ನು ಹೇಳೀತೆ? ಅದ್ವೈತಿಗಳು ಹೇಳುವಂತೆ ವಸ್ತುಪೂರ್ಣತ್ವರೂಪವಾದ ಅದ್ವೈತವನ್ನೆ ಬ್ರಹ್ಮಶಬ್ದ ಹೇಳಬೇಕು'- ಈ ಆಕ್ಷೇಪ ಸರಿಯಲ್ಲ. ಸಮಸ್ತ ವೇದಾಂತವು ವಿಚಾರವಿಧಿಗೆ ಅಧೀನ. ವಿಚಾರವಿಧಿ ಪ್ರಧಾನ. ಅದರಲ್ಲಿರುವ ಬ್ರಹ್ಮಶಬ್ದ ಪ್ರಬಲ. ಅದ್ವೈತ ಬೋಧಕವಾದ ವೇದಾಂತ ವಾಕ್ಯಪ್ರಮಾಣ. ಉಪಕ್ರಮಾದಿಗಳು ಲಿಂಗಪ್ರಮಾಣ. ಬ್ರಹ್ಮಶಬ್ದ ಶ್ರುತಿಪ್ರಮಾಣ. ವಾಕ್ಯಲಿಂಗಗಳಿಗಿಂತ ಶ್ರುತಿ ಪ್ರಬಲ ಎಂದು ಪೂರ್ವ ಮೀಮಾಂಸೆಯಲ್ಲಿ ನಿರ್ಣಯವಾಗಿದೆ. ಇಲ್ಲಿಯೂ ಮುಂದೆ ವಾಮನಾಧಿಕರಣದಲ್ಲಿ ಅದು ಸ್ಪಷ್ಟವಿದೆ. ವೇದಾಂತ ಐಕ್ಯವನ್ನು ಹೇಳಲು ಮೊದಲಿಗೆ ಬ್ರಹ್ಮಶಬ್ದದಿಂದ ಬ್ರಹ್ಮನನ್ನು ಹೇಳಬೇಕು. ಅದರಿಂದ ಬ್ರಹ್ಮಶಬ್ದ ಉಪಜೀವ್ಯವೂ ಹೌದು. ಹೀಗಾಗಿ ಸಂಖ್ಯೆಯಲ್ಲಿ ಬ್ರಹ್ಮಶಬ್ದ ಒಂದೇ ಆಗಿದ್ದರೂ ಸ್ವಭಾವದಿಂದ ಪ್ರಬಲವೆ ಆಗಿದೆ. ಸಂಖ್ಯಾಪ್ರಾಬಲ್ಯಕ್ಕಿಂತಲೂ ಸ್ವಭಾವ ,ಪ್ರಾಬಲ್ಯ ಮೇಲು. ಬ್ರಹ್ಮಶಬ್ದಕ್ಕೆ ವಸ್ತುಪೂರ್ಣತ್ವ ಅರ್ಥಹೇಳಲು ಬರುವುದಿಲ್ಲವೆಂದು ಮುಂದೆ ಹೇಳುತ್ತೇವೆ. ಅದರಿಂದ ಅದು ನಿರವಕಾಶ. ಉಪಕ್ರಮಾದಿಗಳು ದ್ವೈತಪರವಾಗಬಲ್ಲವು. ಆದರಿಂದ ಸಾವಕಾಶ. ವಸ್ತುತಃ ವಿಚಾರವಿಧಾಯಕವಾಕ್ಯಗಳು ಸಾವಿರಾರು. ಅವುಗಳಲ್ಲಿರುವ ಓಂ ಬ್ರಹ್ಮ ಆತ್ಮ ನಾರಾಯಣಾದಿ ಶಬ್ದಗಳೂ ಸಾವಿರಾರು. ಅವುಗಳಲ್ಲಿ ಒಂದೊಂದು ಶಬ್ದವೂ ನಾನಾವಿಧ ವಿಚಾರ ವಿಧಿಗಳಲ್ಲಿ ಬರುವುದರಿಂದ ಸಂಖ್ಯೆಯಲ್ಲಿಯೂ ಅಪರಿಮಿತವೆ. ಬ್ರಹ್ಮಶಬ್ದವು ಜೀವಬ್ರಹ್ಮ ಭೇದದ ವಿಷಯದಲ್ಲಿ ಪ್ರತ್ಯಕ್ಷ ಅನುಮಾನ ಆಗಮ ಎಂಬ ಮೂರು ಪ್ರಮಾಣಗಳನ್ನು ಸೂಚಿಸುತ್ತಿದೆ. ಅವುಗಳಲ್ಲಿ ಪ್ರತ್ಯಕ್ಷಾನುಭವ ಒಂದಕ್ಕೇ ಸಾವಿರ ಆಗಮ ವಾಕ್ಯಗಳಿದ್ದರೂ ಅವು ಬಾಧಕವಾಗಲಾರವು. ಆದರಿಂದ ವಿಷಯಾದಿಗಳಿರುವುದರಿಂದ ವಿಚಾರ ಯುಕ್ತವೇ ಆಗಿದೆ.

ಬ್ರಹ್ಮಶಬ್ದಕ್ಕೂ ಗುಣಪೂರ್ಣ ಎಂದೇ ಅರ್ಥ. ಓಂಕಾರಕ್ಕೂ ಅದೇ ಅರ್ಥವೆಂದರೆ ವ್ಯರ್ಥವಾಗುವುದಿಲ್ಲವೆ? ಎಂದರೆ, ಬ್ರಹ್ಮ ಜೀವನಿಗಿಂತ ಭಿನ್ನನಾಗಿದ್ದು ವಿಚಾರಯೋಗ್ಯನೆನ್ನಲು 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬಲ್ಲಿ ಗುಣಪೂರ್ಣ ಎಂಬ ಅರ್ಥದ ಬ್ರಹ್ಮಶಬ್ದವಿರುವಂತೆ 'ಓಮಿತ್ಯೇತದಕ್ಷರಮುದ್ಗೀಥಮುಪಾಸೀತ' ಎಂಬಲ್ಲಿ ಅದೇ ಅರ್ಥದ ಓಂಕಾರವಿದೆ. ಇದು ಉಪಲಕ್ಷಣ. 'ನಾರಾಯಣಂ ಮಹಾಜ್ಞೇಯಂ' ಎಂಬಲ್ಲಿ ಅದೇ ಅರ್ಥದ ನಾರಾಯಣ ಶಬ್ದವಿದೆ. ಹೀಗೆ ಅನೇಕ ವಿಚಾರವಿಧಿ ವಾಕ್ಯಗಳಲ್ಲಿ ಅನೇಕ ಸಿದ್ಧಾಂತ ಯುಕ್ತಿಗಳಿವೆ ಎಂದು ಸೂಚಿಸಲು ಓಂಕಾರ ಸೂತ್ರದಲ್ಲಿ ಬೇಕು.

ಒಂದೇ ಅರ್ಥದ ಎರಡು ಶಬ್ದಗಳಿಗೆ ಅನ್ವಯ ಹೇಳಿದರೆ 'ಗುಣಪೂರ್ಣನಾದ ಗುಣಪೂರ್ಣ' ಎಂದಾದೀತೆಂಬ ಸಮಸ್ಯೆ ಬಂದರೆ ಎರಡೂ ವಿಷ್ಣು ಎಂಬರ್ಥದಲ್ಲಿ ಯೋಗರೂಢವಾಗಿರುವುದರಿಂದ ಒಂದರ ಯೋಗಾಂಶವನ್ನು ಇನ್ನೊಂದರ ರೂಢ್ಯಂಶವನ್ನೂ ಇಟ್ಟುಕೊಂಡು ಅನ್ವಯ ಹೇಳಬೇಕು. 'ಆತ್ಮೇತಿ ತೂಪಗಚ್ಛಂತಿ' ಸೂತ್ರದಲ್ಲಿ ಸುಧೆಯಲ್ಲಿ ಎರಡು ಆತ್ಮ ಶಬ್ದಗಳಿಗೆ ಹಾಗೇ ಅನ್ವಯವೆಂದು ಹೇಳಿದೆ. 'ಪರಿ ಯದಿಂದ್ರ ರೋದಸೀ ಉಭೇ' ಎಂಬ ಮಂತ್ರವ್ಯಾಖ್ಯಾನದಲ್ಲಿ ಋಗ್ಭಾಷ್ಯ ಟೀಕೆಯಲ್ಲಿ ಎರಡು ಇಂದ್ರಶಬ್ದಗಳಿಗೆ ಹಾಗೇ ಅನ್ವಯ ಉಕ್ತವಾಗಿದೆ.

ಓಂಕಾರ ಪ್ರತಿಪಾದ್ಯನಾದ ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕೆಂದು ಹೇಳುವುದಕ್ಕೆ ಇನ್ನೊಂದು ಪ್ರಯೋಜನವಿದೆ. ಓಂಕಾರಾರ್ಥವೆ ವ್ಯಾಹೃತಿ ಗಾಯತ್ರಿ ಪುರುಷಸೂಕ್ತಗಳ ಮೂಲಕ ಸಮಸ್ತವೇದಾರ್ಥ. ಅದರಿಂದ ಸಮಸ್ತವೇದಗಳು ಈ ವಿಚಾರಶಾಸ್ತ್ರದಲ್ಲಿ ವಿಚಾರಕ್ಕೊಳಪಡುವ ಪ್ರಮಾಣಗಳು ಎಂದು ಸೂಚಿಸಿದಂತಾಗುತ್ತದೆ. 'ಪ್ರವತ್ಯನೋಂಕೃತಂ ಬ್ರಹ್ಮ' ಎನ್ನುವಂತೆ ಅದೃಷ್ಟಫಲಕ್ಕಾಗಿಯೂ ಓಂಕಾರ ಬೇಕು

## ಅಥಶಬ್ದಕ್ಕೆ ಮಂಗಳ ಅರ್ಥವಲ್ಲ

ಮಂಗಲ ಅಥಶಬ್ದೋಚ್ಚಾರಣದಿಂದಾಗುವ ಪ್ರಯೋಜನವೆ ಹೊರತು ಶಕ್ತಿಯಿಂದಾಗಲಿ ಲಕ್ಷಣೆಯಿಂದಾಗಲಿ ಅಥಶಬ್ದದಿಂದ ಮಂಗಳದ ಪ್ರತೀತಿ ಉಂಟಾಗುವುದಿಲ್ಲ. ಸೂತ್ರದಲ್ಲಿ ಅಥಶಬ್ದದಿಂದ ಮಂಗಳ ವಿವಕ್ಷಿತವೂ ಅಲ್ಲ. ವಿವಕ್ಷೆ ಮಾಡಿದರೆ ಅಧಿಕಾರದ ಬಗ್ಗೆ ಸೂತ್ರದಲ್ಲಿ ಏನೂ ಹೇಳಿದಂತಾಗುವುದಿಲ್ಲ ಎಂಬ ಪ್ರಸಂಗವೂ ಇದೆ.

## ಜಿಜ್ಞಾಸುವಿನ ಅರ್ಹತೆಗಳು

'ಭಕ್ತಿಮಾನ್ ಪರಮೇ ವಿಷ್ಣೌ' ಎಂದು ಮುಂತಾಗಿ ನಮ್ಮ ಭಾಷ್ಯದಲ್ಲಿ ಹೇಳಿದ ವಿಷ್ಣುಭಕ್ತಿಪೂರ್ವಕ ಅಧ್ಯಯನ ಮುಂತಾದುವೆ ಜಿಜ್ಞಾಸುವನಲ್ಲಿರಬೇಕಾದ ನಿಜವಾದ ಅರ್ಹತೆಗಳು. ಪರಭಾಷ್ಯಕಾರರು ಹೇಳಿದುದಲ್ಲ.

## .ಟೀಕಾಪಾಠ ಶೋಧನೆ

ಅಥಶಬ್ದಾರ್ಥ ವಿವರಣೆಗೆ ಹೊರಟ ಟೀಕಾಪಂಕ್ತಿಯಲ್ಲಿ 'ತತ್ಫಲತಯಾ' 'ಅಥಶಬ್ದ ಮಂಗಳವನ್ನು ಉಂಟುಮಾಡುವುದರಿಂದ' ಎಂದಿದೆ. 'ತತ್ಪರತಯಾ' 'ಮಂಗಳವೆಂಬ ಅರ್ಥದಲ್ಲಿ ಅಥಶಬ್ದಕ್ಕೆ ತಾತ್ಪರ್ಯವಿದೆ' ಎಂದೂ ಪಾಠವಿದೆ. ಇದು ಸರಿಯಲ್ಲ. ಅಥಶಬ್ದದಲ್ಲಿ ಅಕಾರ ವಿಷ್ಣುವಾಚಕ. ವಿಷ್ಣು ಮಂಗಳಸ್ವರೂಪ. ಆದರಿಂದ ಮಂಗಳಪರತ್ವವನ್ನು ಅಥಶಬ್ದಕ್ಕೆ ಏಕೆ ಹೇಳಬಾರದು? ಎಂದರೆ ಗ್ರಂಥಾರಂಭದಲ್ಲಿ ಇಂಥ ಮಂಗಳ ಪ್ರಸಕ್ತವಲ್ಲ. ವಿಘ್ನ ನಿವಾರಣೆ ಮಾಡಬಲ್ಲ ವಿಷ್ಣುಸ್ಮರಣೆ ಅಥಶಬ್ದೋಚ್ಚಾರಣೆಗಳು ಮಂಗಳಗಳು. ಇವು ಅಥಶಬ್ದಾರ್ಥವಲ್ಲ. 'ಮಂಗಲೋಕ್ತ್ಯಾದೇಃ ಶಬ್ದಾಂತರೇಣಾಪಿ ಸಂಭವಾತ್' 'ಮಂಗಲವನ್ನು ಹೇಳುವುದು ಬೇರೆ ಶಬ್ದದಿಂದಲೂ ಶಕ್ಯ' ಎಂಬ ಟೀಕಾವಾಕ್ಯಕ್ಕೂ ಮಂಗಳ ಅಥಶಬ್ದದ ಅರ್ಥ ಎಂದರ್ಥವಲ್ಲ. 'ಮಂಗಲವನ್ನು ಹೇಳುವುದು' ಎಂದರೆ ಮಂಗಳಕರವಾದ ಅಥಶಬ್ದಾದಿಗಳನ್ನು ಉಚ್ಚರಿಸುವುದು ಎಂದರ್ಥ. 'ತತ್ಪರತಯಾ' ಎಂಬ ಪಾಠ ಪ್ರಾಮಾಣಿಕವಾಗಿರುವುದಾದರೆ 'ಪರ' ಎಂದರೆ ಮುಖ್ಯಪ್ರಯೋಜನ, ಅಥಶಬ್ದಕ್ಕೆ ಮಂಗಳ ಉಂಟುಮಾಡುವುದೆ ಮುಖ್ಯಪ್ರಯೋಜನ ಎಂದು ಅಭಿಪ್ರಾಯ ಹೇಳಬೇಕು.

'ಅಥಶಬ್ದೋ ಮಂಗಲಾರ್ಥಃ' ಎಂಬ ಭಾಷ್ಯದಲ್ಲಿ ಎರಡೂ ಅರ್ಥ ವಿವಕ್ಷಿತವೆನ್ನಬಹುದು. ವಿಷ್ಣುಸ್ಮರಣ ಅಥಶಬ್ದೋಚ್ಚಾರಣರೂಪ ಮಂಗಲವು ಅಥಶಬ್ದಕ್ಕೆ 'ಅರ್ಥ', ಅಂದರೆ ಪ್ರಯೋಜನ ಎಂದು. ಮತ್ತು ಮಂಗಲಸ್ವರೂಪನಾದ ವಿಷ್ಣು ಅಥಶಬ್ದಕ್ಕೆ 'ಅರ್ಥ' ಅಂದರೆ ವಾಚ್ಯ ಎಂದು. ವಿಷ್ಣುವಾಚಕವಾದ್ದರಿಂದ ಅಥಶಬ್ದ ವಿಷ್ಣುಸ್ಮರಣೆ ಉಂಟುಮಾಡುತ್ತ ಮಂಗಲಪ್ರಯೋಜನಕವಾಗುತ್ತದೆ ಎಂದು ತತ್ವಪ್ರದೀಪ ಹೇಳಿದೆ.

## ಅಥಾತಃ ಶಬ್ದಗಳ ವೈಶಿಷ್ಟ್ಯ

ಎಲ್ಲ ಸೂತ್ರಗ್ರಂಥಗಳಲ್ಲಿ ಅಥ ಅತಃ ಶಬ್ದಗಳು ಪ್ರಾರಂಭದಲ್ಲಿ ತಪ್ಪದೆ ಬರಲು ಮೂರು ಕಾರಣಗಳಿವೆ. ೧. ಅವಶ್ಯ ಹೇಳಬೇಕಾಗಿರುವುದನ್ನು ಅವು ಹೇಳುತ್ತವೆ. ೨. ಆ ಶಬ್ದಗಳ ಸ್ವರೂಪದಲ್ಲಿಯೆ ಏನೋ ಶಕ್ತಿ ಅಡಗಿದೆ. ೩. ಅತ್ಯಂತ ಪ್ರಶಸ್ತವಾದ ಅರ್ಥಗಳು ಅವುಗಳಿಗೆ ಇವೆ.

## 'ಮಹತ್ತತ್ವ' ಶಬ್ದಪ್ರಯೋಗ

'ಮಹತ್‌ತತ್ವ' 'ಮಹಾತತ್ವ'ವಾಗಬೇಕೆಂದು 'ಆನ್‌ಮಹತಃ ಸಮಾನಾಧಿಕರಣ ಜಾತೀಯಯೋಃ' ಎಂಬ ಪಾಣಿನಿಸೂತ್ರ ಹೇಳುತ್ತದೆ. 'ಮಹತ್ತತ್ವ' ಎಂಬ ಪ್ರಯೋಗ ಸರಿಯೆ? ಈ ಪ್ರಶ್ನೆಗೆ ಸಮಾಧಾನ - ಈ ಸೂತ್ರದಲ್ಲಿ ಪದಗಳ ಜೋಡಣೆಯಲ್ಲಿ ವೈಚಿತ್ರ್ಯವಿರುವುದರಿಂದ ಈ ಸೂತ್ರಗಲ್ಲಿ ಹೇಳಿದ ಆಕಾರಾದೇಶ ನಿಯಮ ಎಲ್ಲ ಕಡೆ ಅನ್ವಯಿಸವುದಿಲ್ಲ ಎಂದು ಸೂಚಿತವಾಗುತ್ತದೆ - 'ಮಹತಃ ಆತ್' ಎಂದು ಸ್ಥಾನವನ್ನು ಮೊದಲಿಗೆ ಹೇಳಿ ಬಳಿಕ ಆದೇಶವನ್ನು ಹೇಳಬೇಕಾಗಿತ್ತು. ವ್ಯತ್ಯಾಸ ಮಾಡಿ 'ಆನ್ಮಹತಃ' ಎಂದಿದೆ. ದ್ವಂದ್ವಸಮಾಸದಲ್ಲಿ ಕಡಿಮೆ ಸ್ವರಾಕ್ಷರ ಉಳ್ಳಶಬ್ದ ಮೊದಲಿಗೆ ಬರಬೇಕು. ಆದರೆ ಇಲ್ಲಿ ವ್ಯತ್ಯಾಸ ಮಾಡಿ 'ಸಮಾನಾಧಿಕರಣ ಜಾತೀಯಯೋಃ' ಎಂದಿದೆ. 'ಸಂಜ್ಞಾಛಂದಸೋ- ರ್ಬಹುಲಂ' ಎಂಬ ವಾರ್ತಿಕವೂ ರೂಢಿಯ ಹೆಸರಾದ 'ಮಹತ್ತತ್ವ' ಶಬ್ದದಲ್ಲಿ ಆಕಾರಾದೇಶ ಮಾಡದಿರುವುದನ್ನು ಸಮ್ಮತಿಸುತ್ತದೆ.

## ಯೋಗ್ಯಜಿಜ್ಞಾಸುಗಳ ಲಕ್ಷಣ

ಹರಿಭಕ್ತಿಯನ್ನೂ ಶಮದಮಾದಿಗಳನ್ನೂ ಸಂಪಾದಿಸಿ ವೇದಾಧ್ಯಯನ ಮಾಡಿದರೆ ಅದು ಬ್ರಹ್ಮವಿಚಾರಕ್ಕೆ ಬೇಕಾಗುವ ಕನಿಷ್ಠ ಅರ್ಹತೆ ಎನಿಸುವುದು. ಅಂದರೆ ಒಬ್ಬ ವ್ಯಕ್ತಿಯಲ್ಲಿರುವ ಅಧ್ಯಯನ ಶಮದಮಾದಿ ಮತ್ತು ವಿಷ್ಣುಪಾದಶರಣಾಗತಿ ಇವುಗಳಲ್ಲಿ ಶಮದಮಾದಿ ಮತ್ತು ವಿಷ್ಣುಪಾದ- ಶರಣಾಗತಿಗಳು ಅಧ್ಯಯನಕ್ಕಿಂತ ಕಡಿಮೆ ಪ್ರಮಾಣದಲ್ಲಿದ್ದರೆ ಅದು ಕನಿಷ್ಠ ಅರ್ಹತೆ. ವಿಷ್ಣುಪಾದ- ಶರಣಾಗತಿಯೊಂದೆ ಅಧ್ಯಯನ ಶಮದಮಾದಿಗಳಿಗಿಂತ ಕಡಿಮೆ ಇದ್ದರೆ ಅದು ಮಧ್ಯಮ ಅರ್ಹತೆ. ಅಧ್ಯಯನ ಶಮದಮಾದಿಗಳು ವಿಷ್ಣುಪಾದ ಶರಣಾಗತಿಗಿಂತ ಕಡಿಮೆ ಇದ್ದರೆ ಅದು ಉತ್ತಮ ಅರ್ಹತೆ.

## ಅತಃಶಬ್ದಾರ್ಥ

'ಅತಃ' ಆದರಿಂದ, ಎಂದು ಹೇಳಿದರೆ 'ಯಾವುದರಿಂದ?' ಎಂಬ ಪ್ರಶ್ನೆ ಬರುತ್ತದೆ. ಹಿಂದೆ ಪ್ರಕೃತವಾದುದನ್ನೆ ಮನಸ್ಸಿನಲ್ಲಿಟ್ಟುಕೊಂಡು 'ಅದರಿಂದ' ಎಂದು ಸರ್ವನಾಮ ಶಬ್ದವನ್ನು ಪ್ರಯೋಗಿಸುತ್ತೇವೆ. ಸೂತ್ರದಲ್ಲಿ 'ಅತಃ' ಶಬ್ದಕ್ಕೆ ಭಾಷ್ಯದಲ್ಲಿ 'ನಾರಾಯಣನ ಅನುಗ್ರಹವಿಲ್ಲದೆ ಮೋಕ್ಷವಿಲ್ಲ. ಜ್ಞಾನವಿಲ್ಲದೆ ನಾರಾಯಣನ ಪರಮಾನುಗ್ರಹ ಲಭ್ಯವಿಲ್ಲ. ಅದರಿಂದ ಬ್ರಹ್ಮವಿಚಾರ ಮಾಡಬೇಕು' ಎಂದು ಅರ್ಥ ಉಕ್ತವಾಗಿದೆ. ಇಲ್ಲಿ ಮೋಕ್ಷಕ್ಕೆ ನಾರಾಯಣನ ಅನುಗ್ರಹವು ಕಾರಣ. ಅನುಗ್ರಹಕ್ಕೆ ಜ್ಞಾನ ಕಾರಣ. ಜ್ಞಾನಕ್ಕೆ ವಿಚಾರ ಕಾರಣ - ಇವೆಲ್ಲವೂ ಹಿಂದೆ ಪ್ರಕೃತವೆ? ಎಂಬ ಪ್ರಶ್ನೆ ಬರುತ್ತದೆ. ಇದಕ್ಕೆ ಏಳು ಬಗೆಯ ಪರಿಹಾರಗಳಿವೆ.

(೧) ಪ್ರಯೋಜವನವಿಲ್ಲದ ಈ ವಿಚಾರಶಾಸ್ತ್ರವೇಕೆ ಎಂಬ ಪೂರ್ವಪಕ್ಷಕ್ಕೆ ಸಮಾಧಾನ ಹೇಳಬಲ್ಲ ಶಬ್ದವು ಸೂತ್ರದಲ್ಲಿ ಬೇರೆ ಯಾವುದೂ ಇಲ್ಲ. ಶ್ರುತಿಗನುಗುಣವಾಗಿ ಭಾಷ್ಯದಲ್ಲಿ ಹೇಳಿದಂತೆ ಮೇಲಿನ ಎಲ್ಲ ಅಂಶಗಳನ್ನೂ ಅಧ್ಯಾಹಾರ ಮಾಡಿಕೊಳ್ಳಬೇಕು. ಅದರಿಂದ ಪ್ರಕೃತವಾದುದನ್ನು ಅತಃಶಬ್ದ ಹೇಳುತ್ತದೆ. 'ಸ್ರುವದಿಂದ ಬೇರ್ಪಡಿಸಿ ತೆಗೆಯಬೇಕು' ಎಂದು ಶ್ರುತಿವಾಕ್ಯವಿದೆ. ಏನನ್ನು? ಎಂದರೆ 'ದ್ರವ ಪದಾರ್ಥವನ್ನು' ಎಂದು ಅಧ್ಯಾಹಾರ ಮಾಡಿಕೊಳ್ಳಬೇಕು. ಸೂತ್ರದಲ್ಲಿ 'ಕರ್ತವ್ಯಾ' ಎಂಬ ಪದಾಧ್ಯಾಹಾರಕ್ಕೆ ಪ್ರಮಾಣವಾಗಿ ಭಾಷ್ಯದಲ್ಲಿ 'ಅವಶ್ಯಕವಾದ ಪದವನ್ನೋ ವಾಕ್ಯವನ್ನೋ ಅಧ್ಯಾಹಾರ ಮಾಡಿಕೊಳ್ಳಬೇಕು' ಎಂಬ ವಚನವನ್ನು ಉದಾಹರಿಸಲಾಗಿದೆ. ಇಲ್ಲಿ 'ವಾಕ್ಯವನ್ನೋ' ಎಂಬುದರಿಂದ ಅತಃ ಶಬ್ದಕ್ಕೆ ಅಪೇಕ್ಷಿತವಾದ ಮೇಲೆ ಹೇಳಿದ ವಾಕ್ಯವನ್ನು ಅಧ್ಯಾಹಾರ ಮಾಡಿಕೊಳ್ಳಬೇಕೆಂದು ಸೂಚಿತವಾಗಿದೆ.

(೨) 'ಜನ್ಮಾದ್ಯಸ್ಯಯತಃ' ಎಂಬ ಸೂತ್ರದಲ್ಲಿ 'ಅಸ್ಯ' 'ಇದರ' ಎಂದರೆ. 'ಈ ಅನುಭವ ಸಿದ್ಧವಾದ ಪ್ರಪಂಚದ' ಜನ್ಮಾದಿಕರ್ತ ಎಂದು ಹೇಳಿದೆ. ಹಾಗೇ ಪ್ರಕೃತದಲ್ಲಿ 'ಅತಃ' ಎಂಬುದರಿಂದ 'ಮೋಕ್ಷ ಭಗವದನುಗ್ರಹ ಮುಂತಾದ ಪ್ರಮಾಣಸಿದ್ಧವಾದ ಪ್ರಯೋಜನವಿರುವುದರಿಂದ' ಎಂದು ಉಕ್ತವಾಗಬಹುದು. ಪ್ರಕೃತವಾಗುವುದೆಂದರೇನು? ಬುದ್ಧಿಸ್ಥವಾಗಿರುವುದು. ಪ್ರಮಾಣಸಿದ್ಧವಾದುದು ಆ ಪ್ರಮಾಣದ ಬಲದಿಂದಲೆ ಬುದ್ಧಿಸ್ಥವಾಗಿರುತ್ತದೆ.

ಜನ್ಮಾದಿಸೂತ್ರದಲ್ಲಿ 'ಅಸ್ಯ' ಎಂದಿರುವುದು ಅದರ ವಿಷಯ ವಾಕ್ಯದಲ್ಲಿ 'ಯತೋ ವಾ ಇಮಾನಿ ಭೂತಾನಿ' ಎಂದು ಹೇಳಿದ 'ಇಮಾನಿ' ಪದದ ರೂಪಾಂತರ ಹೊರತು 'ಅನುಭವಸಿದ್ಧವಾದ' ಎಂಬ ಅರ್ಥದಲ್ಲಿ ಅಲ್ಲ ಎಂಬ ಆಕ್ಷೇಪ ಬರಬಹುದು. ಆದರೆ ವಿಷಯ ವಾಕ್ಯದಲ್ಲಿಯೂ 'ಇಮಾನಿ' 'ಈ ಚೇತನಗಳು' ಎಂದುದು ಅನುಭವಸಿದ್ಧವಾದವುಗಳೆಂಬ ಅಭಿಪ್ರಾಯದಿಂದಲೆ.

(೩) ಈ ಸೂತ್ರಕ್ಕೆ ಅನೇಕ ವಿಚಾರವಿಧಾಯಕ ವಾಕ್ಯಗಳು ವಿಷಯವಾಕ್ಯಗಳಾಗಿವೆ. ಅವುಗಳಲ್ಲಿ ಅನೇಕ ಕಡೆ ಮೋಕ್ಷ ಭಗವದನುಗ್ರಹ ಮುಂತಾದುವನ್ನು ಹೇಳಿರುವುದರಿಂದ ಸೂತ್ರ ಅವುಗಳನ್ನು ಮನಸ್ಸಿನಲ್ಲಿಟ್ಟುಕೊಂಡು 'ಅತಃ' ಎಂದಿದೆ.

(೪) ವಿಚಾರವು ಜ್ಞಾನ ಭಗವದನುಗ್ರಹಗಳಿಗೆ ಕಾರಣವಾಗುವುದು ಬ್ರಹ್ಮತರ್ಕದಲ್ಲಿ ಉಕ್ತವಾಗಿದೆ. ಬ್ರಹ್ಮತರ್ಕ ಈ ವಿಚಾರಶಾಸ್ತ್ರಕ್ಕೆ ಅಂಗವಾಗಿದೆ. ಅಲ್ಲದೆ ಬ್ರಹ್ಮತರ್ಕವನ್ನು ರಚಿಸಿದವರೂ ಸೂತ್ರಕಾರರಾದ ಬಾದರಾಯಣರೆ. ಅದರಿಂದ ಬ್ರಹ್ಮತರ್ಕದಲ್ಲಿ ಹೇಳಿದ್ದನ್ನು ಮನಸ್ಸಿನಲ್ಲಿಟ್ಟುಕೊಂಡು ಸೂತ್ರಕಾರರು 'ಅತಃ' ಎಂದಿದ್ದಾರೆ.

(೫) ಮುಂದೆ ಜನ್ಮಾದಿಸೂತ್ರದಲ್ಲಿ ವಿಚಾರದಿಂದ ಜ್ಞಾನ, ಭಗವದನುಗ್ರಹ, ಮೋಕ್ಷಗಳುಂಟಾಗುವುದನ್ನು ಹೇಳುತ್ತಿದೆ. ಅಲ್ಲಿ ಹೇಳಲಿರುವುದನ್ನು ಪ್ರಥಮ ಸೂತ್ರವು ಅತಃ ಎಂದು ನಿರ್ದೇಶಿಸಬಹುದು. ಅಥೈಷ ಜ್ಯೋತಿಃ ಅಥೈಷ ವಿಶ್ವಜ್ಯೋತಿಃ ಎಂಬಲ್ಲಿ ಬರುವ 'ಏಷಃ' 'ಈ ಯಾಗವು' ಮುಂದೆ ಹೇಳುವ ಯಾಗವನ್ನು ನಿರ್ದೇಶಿಸುತ್ತಿದೆ ಎಂದು ಮೀಮಾಂಸಕರು ಒಪ್ಪಿದ್ದಾರೆ.

(೬) ಈ ಸೂತ್ರದಲ್ಲಿಯೆ ಅಥಶಬ್ದವು 'ಮೋಕ್ಷಾಭಿಲಾಷೆಯನ್ನು ಹೊಂದಿದ ಬಳಿಕ' ಬ್ರಹ್ಮವಿಚಾರ ಮಾಡಬೇಕೆಂದು ಹೇಳಿದೆ. ಮೋಕ್ಷವು ಜ್ಞಾನ ಭಗವದನುಗ್ರಹಗಳ ಮೂಲಕವೆ ವಿಚಾರದಿಂದ ಲಭ್ಯವೆಂಬುದು ಪ್ರಮಾಣಸಿದ್ಧ. ಯಾಗಕ್ಕೆ ಸ್ವರ್ಗವೆ ಫಲವೆಂದು ಶ್ರುತಿ ಹೇಳುವಾಗ ಸ್ವರ್ಗವು ಅದೃಷ್ಟದ ಮೂಲಕವೆ ಲಭ್ಯವಾದ್ದರಿಂದ ಅದನ್ನೂ ಶ್ರುತಿಯು ಹೇಳಿದಂತಾಗುವುದು. ಭತ್ತವು ಯಾಗ ಸಾಧನವೆಂದು ಶ್ರುತಿ ಹೇಳುವಾಗ ಪ್ರೋಕ್ಷಣ ಅವಹನನಾದಿಗಳ ಮೂಲಕವೆ ಭತ್ತವು ಯಾಗಸಾಧನವಾಗುವುದರಿಂದ ಅದನ್ನೂ ಶ್ರುತಿ ಹೇಳಿದಂತಾಗುವುದು. ಅದರಿಂದ ವಿಚಾರವು ಜ್ಞಾನ ಭಗವದನುಗ್ರಹಗಳ ಮೂಲಕ ಮೋಕ್ಷಸಾಧನವಾಗುವುದರಿಂದ ಅದನ್ನೂ ಅಥಶಬ್ದ ಹೇಳಿದಂತಾಗುವುದು. ಆಗ ಪ್ರಕೃತವಾದುದನ್ನು ಅತಃ ಶಬ್ದವು ನಿರ್ದೇಶಿಸುತ್ತದೆ.

(೭) ಮನನರೂಪವಾದ ವಿಚಾರಕ್ಕೆ ಶ್ರವಣ ಮೊದಲಿಗೆ ಅವಶ್ಯಕವೆಂದು ಅಥಶಬ್ದ ಹೇಳುತ್ತದೆ. ಶ್ರವಣಕಾಲದಲ್ಲಿ ತಿಳಿದಿದ್ದ ಮೋಕ್ಷ ಭಗವದನುಗ್ರಹಾದಿಗಳ ಕಾರ್ಯಕಾರಣಭಾವ ಮನನ ಪ್ರಾರಂಭದಲ್ಲಿ ಬುದ್ಧಿಸ್ಥವಾಗಿದ್ದು ವಿಚಾರಕರ್ತವ್ಯತ್ವಕ್ಕೆ ಅದು ಹೇತುವಾಗಲು ಯೋಗ್ಯವೂ ಆಗಿರುವುದರಿಂದ ಅದನ್ನು ಹೇತುವೆಂದು ಅತಃ ಶಬ್ದವು ನಿರ್ದೇಶಿಸುತ್ತದೆ.

## ಅಥ ಅತಃ ಬ್ರಹ್ಮ ಶಬ್ದಗಳ ಸಾರ್ಥಕತೆ

ಅತಃಶಬ್ದವು ಹೀಗೆ ಶ್ರವಣಕಾಲದಲ್ಲಿ ತಿಳಿದಿರುವ ಮತ್ತು ಪ್ರಮಾಣಸಿದ್ಧವಾದ ಜಿಜ್ಞಾಸುವಿನ ಅರ್ಹತೆಗಳು, ವಿಷಯ, ಪ್ರಯೋಜನ ಎಲ್ಲವನ್ನೂ ಹೇಳುವುದಾದರೆ ಅಥ ಬ್ರಹ್ಮ ಶಬ್ದಗಳು ಏಕೆ? ಎಂದರೆ, ಅರ್ಹತೆ ವಿಷಯ ಪ್ರಯೋಜನಗಳ ವೈಲಕ್ಷಣ್ಯಸೂಚನೆಗಾಗಿ ಮೂರು ಶಬ್ದಗಳು ಬೇಕು. ಅರ್ಹತೆ ಸಿದ್ಧವಾದುದೆ ಇರಬೇಕು. ಪ್ರಯೋಜನ ಅಸಿದ್ಧವೆ ಇರಬೇಕು. ವಿಷಯ ಧರ್ಮವಿಚಾರದಲ್ಲಿ ಅಸಿದ್ಧವಾದ ಯಾಗಾದಿಧರ್ಮ, ಬ್ರಹ್ಮವಿಚಾರದಲ್ಲಿ ಸಿದ್ಧವಾದ ಬ್ರಹ್ಮ. ಇವು ಮೂರರಲ್ಲಿರುವ ವೈಲಕ್ಷಣ್ಯಗಳು. ಮತ್ತು ಮೂರು ಶಬ್ದಗಳಲ್ಲಿಯೂ ತಮ್ಮದೆ ಆದ ವಿಲಕ್ಷಣಶಕ್ತಿ ಇದೆ, ಮಂಗಳಕರವಾಗಿದೆ. ಸೂತ್ರದಿಂದ ಅರ್ಥನಿರ್ಣಯವಾಗಬೇಕಾಗಿರುವ ಬೇರೆಬೇರೆ ಶ್ರುತಿವಾಕ್ಯಗಳನ್ನು ಜ್ಞಾಪಿಸುತ್ತವೆ. ಬೇರೆಬೇರೆ ಸಂದೇಹಗಳಿಗೆ ತಮ್ಮದೆ ಆದ ಪರಿಹಾರವನ್ನೂ ನೀಡುತ್ತವೆ.

ಸಂಸಾರ ಮಿಥ್ಯೆಯಾದ್ದರಿಂದ ಜ್ಞಾನದಿಂದ ಅದು ನಿವೃತ್ತಿಹೊಂದಲು ನಾರಾಯಣನ ಅನುಗ್ರಹ ಬೇಕಾಗಿಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ಜಗತ್ ಸತ್ಯತ್ವವನ್ನೂ ಸತ್ಯವಸ್ತುವಿಗೆ ಮಾತ್ರವೆ ನಾಶಯೋಗ್ಯತ್ವ ಮುಂತಾದ ಯುಕ್ತಿಯನ್ನೂ ಅತಃ ಶಬ್ದ ಹೇಳುತ್ತದೆ. ಕೇವಲ ಪ್ರಯೋಜನವನ್ನಲ್ಲ. ವಿಷಯ ಪ್ರತಿಪಾದನೆಗೆ ಬೇಕಾಗುವ ಗುಣಪೂರ್ಣತ್ವಾದಿ ಯುಕ್ತಿಗಳನ್ನು ಬ್ರಹ್ಮಶಬ್ದ ಹೇಳುತ್ತದೆ. ಆಗಮವು ಪ್ರಮಾಣವಲ್ಲ. ಪ್ರಮಾಣವೆಂದೊಪ್ಪಿದರೂ ಸಿದ್ಧವಾದ ಬ್ರಹ್ಮನ ವಿಷಯದಲ್ಲಿ ಪ್ರಮಾಣವಲ್ಲ ಎಂಬ ಆಕ್ಷೇಪಕ್ಕೆ ಉತ್ತರವಾಗಿ ವೇದಪ್ರಾಮಾಣ್ಯ ಸಿದ್ಧಪರತ್ವ ಮುಂತಾದ ವಿಷಯ ಸಾಧಕಯುಕ್ತಿಗಳನ್ನೂ ಅತಃಶಬ್ದ ಹೇಳುತ್ತದೆ.

## 'ಬ್ರಹ್ಮಜಿಜ್ಞಾಸಾ'-ಯಾವ ಸಮಾಸ?

'ಬ್ರಹ್ಮಜಿಜ್ಞಾಸಾಶಬ್ದ ಷಷ್ಠೀತತ್ಪುರುಷ ಸಮಾಸ. ಕರ್ಮಾರ್ಥಕ ಷಷ್ಠೀವಿಭಕ್ತಿಯನ್ನಿಟ್ಟು ಕೊಳ್ಳಬೇಕು. ಶೇಷ ಷಷ್ಠಿಯನ್ನಲ್ಲ. ಶೇಷ ಷಷ್ಠಿಯಿಂದ ಜಿಜ್ಞಾಸೆಗೆ ಸಂಬಂಧಿಸಿದುದು ಬ್ರಹ್ಮ ಎಂದಿಷ್ಟೇ ತಿಳಿಯುತ್ತದೆ. ಯಾವ ಸಂಬಂಧ? ಎಂದು ವಿಚಾರ ಬಂದಾಗ ಬೇರಾವುದೂ ಅಲ್ಲ, ಕರ್ಮತ್ವವೆ ಸಂಬಂಧ ಎಂದು ತಿಳಿಯಬೇಕಾಗುತ್ತದೆ. ಇದು ಬಳಸು ದಾರಿ. ಶ್ರುತಿಯಲ್ಲಿಯೂ 'ತದ್ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂದು ಬ್ರಹ್ಮನನ್ನು ಜಿಜ್ಞಾಸೆಗೆ ಕರ್ಮ ಎಂದೇ ನಿರ್ದೇಶಿಸಿದೆ' ಎಂದು ಅದ್ವೈತಿಗಳು ಹೇಳುತ್ತಾರೆ. ಆದರೆ ನಿರ್ಗುಣಬ್ರಹ್ಮ ಯಾವ ಕಾರಕವೂ ಆಗಲಾರದು, ಕರ್ಮವೆನಿಸವುದು ಹೇಗೆ?

ವಿಚಾರದಿಂದ ಬರುವ ಅಪರೋಕ್ಷವೃತ್ತಿಗೆ ವಿಷಯನಾಗುವುದೇ ಕರ್ಮತ್ವವೆನ್ನುವುದೂ ಸರಿಯಲ್ಲ. ಅಪರೋಕ್ಷವೃತ್ತಿಯಲ್ಲಿ ಪ್ರತಿಬಿಂಬಿತವಾಗುವ ಚೈತನ್ಯಕ್ಕೆ ಘಟಾದಿಗಳು ವಿಷಯವಾಗುವುದ- ರಿಂದಲೆ ಘಟಾದಿಗಳು ಕರ್ಮವೆನಿಸುತ್ತವೆ. ವೃತ್ತಿಯಲ್ಲಿ ಪ್ರತಿಬಿಂಬಿಸುವುದೂ ತಾನೆ, ಆ ಪ್ರತಿಬಿಂಬಕ್ಕೆ ವಿಷಯನಾಗವುದೂ ತಾನೆ ಎಂದರೆ ಕರ್ತೃಕರ್ಮಗಳೆರಡೂ ಒಂದು ಎಂದಂತಾಗುವುದೆಂದು ಹೆದರಿ ಅದ್ವೈತಿಗಳು ಚೈತನ್ಯದಲ್ಲಿ ಕರ್ಮತ್ವವನ್ನು ಒಪ್ಪಿಲ್ಲ. ಆದರಿಂದ ಬ್ರಹ್ಮಕರ್ಮವೆನಿಸುವುದು ಹೇಗೆ?

ನಮ್ಮ ಸಿದ್ಧಾಂತದಲ್ಲಿ ಕರ್ಮಷಷ್ಠೀ ಸಮಾಸವನ್ನೇ ಒಪ್ಪಿದ್ದೇವೆ. ಇದು ಬ್ರಹ್ಮಸ್ವರೂಪ ವಿಚಾರ ಪ್ರಧಾನ ಎಂಬ ಅಭಿಪ್ರಾಯದಿಂದ. ಜೊತೆಗೆ ಬ್ರಹ್ಮಸ್ವರೂಪವಿಚಾರಕ್ಕೆ ಸಂಬಂಧಿಸಿದ ಲಕ್ಷಣ ಪ್ರಮಾಣ ಪ್ರಯೋಜನ ಮುಂತಾದ ಬೇರೆ ವಿಷಯಗಳ ವಿಚಾರವನ್ನೂ ಮಾಡಬೇಕೆಂಬುದು ಶ್ರುತಿಸೂತ್ರಗಳ ಅಭಿಪ್ರಾಯ.

'ಕರ್ಮಾರ್ಥದಲ್ಲಿ' ಎಂದು ವಿಹಿತವಾದ ಷಷ್ಠೀವಿಭಕ್ತಿ ಬಂದಿದ್ದರೆ ಸಮಾಸವಾಗುವುದಿಲ್ಲ ಎಂದು 'ಕರ್ಮಣಿ ಚ' ಎಂಬ ಸೂತ್ರ ಹೇಳುತ್ತದೆ. ಪ್ರಕೃತದಲ್ಲಿ 'ಉಭಯ ಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಲ್ಲಿ 'ಕರ್ಮಣಿ'

'ಕರ್ಮಾರ್ಥದಲ್ಲಿ' ಎಂದು ಷಷ್ಠಿ ವಿಹಿತವಾಗಿದೆ ಎಂಬ ಸಮಸ್ಯೆಗೆ ಹೀಗೆ ಉತ್ತರ - 'ಅಕಾಕಾರಯೋಃ ಪ್ರಯೋಗೇ ನೇತಿ ವಕ್ತವ್ಯಂ' ಎಂಬ ವಾರ್ತಿಕದಂತೆ 'ಅಕ' ಮತ್ತು 'ಅ' ಪ್ರತ್ಯಯ ಸ್ಥಳಗಳಲ್ಲಿ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಂತೆ ಕರ್ಮಷಷ್ಠಿ ಬರುವುದು ನಿಷಿದ್ಧವಾಗಿದೆ. ಪ್ರಕೃತದಲ್ಲಿ 'ಜಿಜ್ಞಾಸಾ' ಶಬ್ದ ಸನ್ ಪ್ರತ್ಯಯಾಂತವಾದ 'ಜಿಜ್ಞಾಸ' ಶಬ್ದದ ಮೇಲೆ 'ಅ' ಪ್ರತ್ಯಯ ಬಂದು ಸಿದ್ಧವಾಗಿರುವುದರಿಂದ 'ಉಭಯಪ್ರಾಪ್ತೌ ಕರ್ಮಣಿ' ಸೂತ್ರವಿಹಿತವಾದ ಷಷ್ಠಿ ಬರುವುದಿಲ್ಲ. 'ಕರ್ತೃಕರ್ಮಣೋಃ ಕೃತಿ' ಎಂದೇ ಷಷ್ಠಿ ಬಂದಿದೆ. ಆದರಿಂದ 'ಕರ್ಮಣಿ ಚ' ಎಂದು ಷಷ್ಠೀಸಮಾಸ ನಿಷೇಧವಿಲ್ಲ. 'ಕೃದ್ಯೋಗ ಲಕ್ಷಣಾ ಷಷ್ಠೀ ಸಮಸ್ಯತೇ' ಎಂದು ಪ್ರತಿಪ್ರಸವವಿರುವುದರಿಂದ 'ಪ್ರತಿಪದವಿಧಾನ ಷಷ್ಠೀ ನ ಸಮಸ್ಯತೇ' ಎನ್ನುವ ನಿಷೇಧವೂ ಅನ್ವಯಿಸುವುದಿಲ್ಲ.

## 'ಜಿಜ್ಞಾಸಾ' ಶಬ್ದಾರ್ಥ - ಸ್ವಮತದಲ್ಲಿ

ಟೀಕೆಯಲ್ಲಿ ಶ್ರವಣಮನನ ನಿದಿಧ್ಯಾಸನ ಇವು ಮೂರು ಜಿಜ್ಞಾಸೆಯೆ ಎಂದಿದೆ. ಸುಧೆಯಲ್ಲಿ ಮನನವೇ ಜಿಜ್ಞಾಸೆ ಎಂದಿದೆ. ಇವುಗಳ ವಿರೋಧ ಪರಿಹಾರಕ್ಕೆ ಹೀಗೆ ಹೇಳಬೇಕು - 'ಜಿಜ್ಞಾಸೆ' ಎಂದರೆ ಶ್ರವಣ ಮುಂತಾದ ಮೂರರಲ್ಲಿಯೂ ಹಾಸು ಹೊಕ್ಕಾಗಿರುವ ಉಪಾಸನೆ, ಅಂದರೆ ಭಗವಂತನಲ್ಲಿ ಮನಸ್ಸಿನ ಏಕಾಗ್ರತೆ. ಇದು ನಿದಿಧ್ಯಾಸನದಲ್ಲಿ ಸ್ವತಃ ಇದೆ. ಶ್ರವಣ ಮನನಗಳಲ್ಲಿ ಪ್ರಮಾಣಗಳ ಮೂಲಕ ಇದೆ ಎಂಬುದು ಟೀಕೆಯ ಅಭಿಪ್ರಾಯ. ಇದು ಸುಧೆಗೂ ಸಂಮತವೆ. ಆದರೆ ಶಾಸ್ತ್ರದ ಅವಶ್ಯಕತೆಯನ್ನು ಸಮರ್ಥಿಸಲು ಮನನ ರೂಪದ ಉಪಾಸನೆಯ ಅವಶ್ಯಕತೆಯನ್ನು ಸಮರ್ಥಿಸಿದರೆ ಸಾಕು ಎಂದು ಸುಧೆ ಅಭಿಪ್ರಾಯಪಡುತ್ತದೆ.

ಜಿಜ್ಞಾಸಾ ಶಬ್ದವು ಜ್ಞಾಧಾತುವಿಗೆ ಇಚ್ಛೆ ಎಂಬ ಅರ್ಥದ 'ಸನ್' ಪ್ರತ್ಯಯ ಸೇರಿ ನಿಷ್ಪನ್ನವಾಗಿದ್ದರೂ ಆ ಶಬ್ದದಿಂದ ಮೊದಲಿಗೆ ವಿಚಾರ ಎಂಬ ಅರ್ಥವೇ ಹೊಳೆಯುತ್ತದೆ ಹೊರತು ಜ್ಞಾನೇಚ್ಛೆಯಲ್ಲ. ಆದರಿಂದಲೆ ಎಲ್ಲ ಸೂತ್ರಕಾರರೂ ಧರ್ಮಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂದು 'ಜಿಜ್ಞಾಸಾ' ಶಬ್ದವನ್ನೆ ಬಳಸುತ್ತಾರೆ. ಅದೇ ಅರ್ಥದ 'ಬುಭುತ್ಸಾ' ಶಬ್ದವನ್ನಲ್ಲ. ಏಕೆ? ಎಂಬ ಪ್ರಶ್ನೆಗೆ, ಬುಭುತ್ಸಾ ಶಬ್ದವನ್ನು ಹೇಳಿದರೆ ಮೊದಲಿಗೆ ಜ್ಞಾನೇಚ್ಛೆ ಎಂಬ ಅರ್ಥ ಹೊಳೆಯುತ್ತದೆ ಹೊರತು ವಿಚಾರವೆಂಬ ಅರ್ಥವಲ್ಲ ಎಂದೇ ಉತ್ತರಿಸಬೇಕು. ಆದರಿಂದ ಜಿಜ್ಞಾಸಾಶಬ್ದಕ್ಕೆ ವಿಚಾರ ಎಂಬ ಅರ್ಥದಲ್ಲಿ ರೂಢಿ ಎಂದು ಒಪ್ಪಬೇಕು. ಲಕ್ಷಣೆ ಎಂದಲ್ಲ.

## ಬ್ರಹ್ಮಸೂತ್ರದಲ್ಲಿ ವಿಚಾರಾಂಶ

ಎಲ್ಲ ವೇದಗಳ ವಿಚಾರವೂ ಬ್ರಹ್ಮಸೂತ್ರದಲ್ಲಿ ಬರಬೇಕು. ಕೇವಲ ಜ್ಞಾನಕಾಂಡ ವಿಚಾರವಲ್ಲ, ಆದರೆ ಮುಖ್ಯ ತಾತ್ಪರ್ಯವಾದ ಭಗವಂತನ ವಿಚಾರ ಇಲ್ಲಿ ಹೊಸತು. ಅವಾಂತರ ತಾತ್ಪರ್ಯಗೋಚರವಾದ ಕರ್ಮ ದೇವತಾ ವಿಚಾರಗಳು ಮಾತ್ರ ಕರ್ಮಮೀಮಾಂಸಾ ದೈವೀ ಮೀಮಾಂಸಾಗಳಲ್ಲಿ ಆಗಿರುತ್ತವೆ. ಇಷ್ಟು ಜಿಜ್ಞಾಸಾಧಿಕರಣದ ಸಾರಾಂಶ

- ವಿದ್ವಾನ್ ಹಯವದನ ಪುರಾಣಿಕರು

# ಜನ್ಮಾಧಿಕರಣ

## ಗುಣಪೂರ್ಣತ್ವದ ಸಮರ್ಥನೆಗಾಗಿ ಜನ್ಮಾಧಿಕರಣ

ಜನ್ಮಾಧಿಕರಣವು ಪ್ರಾರಂಭವಾಗುತ್ತಿದೆ. ಗುಣಪೂರ್ಣನಾದ್ದರಿಂದ ಬ್ರಹ್ಮನ ಜಿಜ್ಞಾಸೆಯನ್ನು ಅವಶ್ಯ ಆಚರಿಸಬೇಕೆಂದು ಜಿಜ್ಞಾಸಾಧಿಕರಣದಲ್ಲಿ ತೀರ್ಮಾನಿಸಿದ್ದಾಯಿತು. ಆ ಗುಣಪೂರ್ಣತ್ವವನ್ನು ಸಮರ್ಥಿಸಲು ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು ಸಮರ್ಥಿಸಬೇಕಾಗಿದೆ. ಅದಕ್ಕಾಗಿಯೇ ಈ ಅಧಿಕರಣ ಹೊರಟಿದೆ. ಇದರಿಂದ ಬ್ರಹ್ಮನು ಜೀವನಿಗಿಂತ ಭಿನ್ನನೂ ಉತ್ತಮನೂ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ಜಿಜ್ಞಾಸಾಧಿಕರಣದಿಂದ ಜನ್ಮಾಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ಅಥವಾ ಪ್ರಪಂಚ್ಯಪ್ರಪಂಚಕ- ಭಾವಸಂಗತಿಯನ್ನು ತಿಳಿಯಬೇಕು.

## ಸಂಶಯ ಹಾಗೂ ಪೂರ್ವಪಕ್ಷ

'ಯತೋ ವಾ' ಎಂಬ ವಾಕ್ಯದಲ್ಲಿರುವ ಜಗತ್ಕಾರಣತ್ವವು ಜೀವನಲ್ಲಿ ಸಿದ್ಧವಾದರೆ ಬ್ರಹ್ಮಶಬ್ದವು ಜೀವನಲ್ಲಿ ಸ್ವರಸವಾಗಿ ಉಪಪನ್ನವಾಗುತ್ತದೆ. ಆವಾಗ ಯೋಗಾರ್ಥನಾದ ವಿಷ್ಣುವನ್ನು ವಿವಕ್ಷಿಸಲು ಕಾರಣವಿಲ್ಲ. ರೂಢಿಯಿಂದ ಜೀವನೇ ಬ್ರಹ್ಮನೆನಿಸುತ್ತಾನೆಂಬದು ಪೂರ್ವಪಕ್ಷದ ಗುರಿ.

'ಯತೋ ವಾ' ಎಂಬ ವಾಕ್ಯದಲ್ಲಿರುವ ಜಗತ್ಕಾರಣತ್ವವು ಜೀವನಲ್ಲಿ ಕೂಡುವುದಿಲ್ಲ. ಆದ್ದರಿಂದ ಬ್ರಹ್ಮಶಬ್ದಕ್ಕೆ ಜೀವನೆಂಬ ಅರ್ಥ ಸ್ವರಸವಾಗುವುದಿಲ್ಲ. ಆವಾಗ ರೂಢ್ಯರ್ಥನಾದ ಜೀವನನ್ನು ಬಿಡಲು ಕಾರಣವಿದೆ. ಬ್ರಹ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಗುರಿ.

ಪೂರ್ವಪಕ್ಷ - ಕೋಶ ಹೇಳುವಂತೆ ಬ್ರಹ್ಮಶಬ್ದದಿಂದ ಜೀವನೇ ಪ್ರತಿಪಾದ್ಯನು ಯೋಗವು ರೂಢಿಗಿಂತ ದುರ್ಬಲವಾಗಿದೆಯೆಂದು ಪೂರ್ವಮೀಮಾಂಸೆಯ ರಥಕಾರಾಧಿಕರಣದಲ್ಲಿ ಸಿದ್ಧವಾಗಿದೆ. ಯೋಗಾರ್ಥವನ್ನು ಇಟ್ಟುಕೊಂಡು ರೂಢ್ಯರ್ಥವನ್ನು ತಿರಸ್ಕರಿಸಬೇಕಾದರೆ ಪ್ರಮಾಣವಿರಬೇಕು. ಆದರೆ ಅಂತಹ ಪ್ರಮಾಣವೇನು ಇಲ್ಲಿ ಕಾಣುವುದಿಲ್ಲ.

## ಬ್ರಹ್ಮಶಬ್ದಪ್ರತಿಪಾದ್ಯ ಜೀವನೆನ್ನಲು ರೂಢಿಪ್ರಮಾಣ

ಇನ್ನು ವಿಷ್ಣುವಿನಲ್ಲಿ ಬ್ರಹ್ಮಶಬ್ದದ ರೂಢಿಯನ್ನು ಹೇಳಲಾಗದು. ಹಾಗಾದಲ್ಲಿ ಯೋಗದಿಂದ ಲಭಿಸುವ ಗುಣಪೂರ್ಣತ್ವವೇ ಸಿದ್ಧವಾಗುತ್ತಿರಲಿಲ್ಲ. ರೂಢಿಯ ಜೊತೆ ಯೋಗವನ್ನು ಹೇಳಿದಾಗ ಈ ಸಮಸ್ಯೆ ಪರಿಹಾರವಾಗಬಹುದು. ಆದರೆ ಅದಕ್ಕೆ ಆಧಾರವಿಲ್ಲ. ಪಂಕಜಾದಿಶಬ್ದಗಳಲ್ಲಿ ಯೋಗರೂಢಿಯನ್ನೂ ಒಪ್ಪುವುದು ಅನಿವಾರ್ಯ. ಕೇವಲ ಯೋಗವನ್ನು ಒಪ್ಪಿದರೆ ಕಪ್ಪೆ ಮೊದಲಾದವುಗಳಲ್ಲಿ ಅತಿಪ್ರಸಂಗ ಬರುವುದರಿಂದ ರೂಢಿಯನ್ನು ಒಪ್ಪಬೇಕಾಗುತ್ತದೆ. ಆದರೆ ವಿಷ್ಣುವಿನಲ್ಲಿ ಬ್ರಹ್ಮಶ್ಬದ ಯೋಗಾರ್ಥ ಒಪ್ಪಿದಾಗ ಅಂತಹ ಅತಿಪ್ರಸಂಗವೇನು ಬರುವುದಿಲ್ಲ. ಹೀಗಿರುವಾಗ ಸುಮ್ಮನೆ ರೂಢಿಯನ್ನು ಏಕೆ ಒಪ್ಪಬೇಕು?

ಈ ವಿಚಾರವೆಲ್ಲವು 'ತದ್‌ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ಶ್ರುತಿಯಲ್ಲಿ ಮಾತ್ರ. 'ತದೇವ ಬ್ರಹ್ಮ' ಇತ್ಯಾದಿ ಸ್ಥಳದಲ್ಲಿ ರೂಢಿಗೆ ಬಾಧಕವಾದ ಸಮುದ್ರಶಾಯಿತ್ವಾದಿ ಲಿಂಗಗಳಿರುವುದರಿಂದ ವಿಷ್ಣುಪರವೆನ್ನಲು ಪೂರ್ವಪಕ್ಷಿಗಳಿಗೆ ಅಭ್ಯಂತರವಿಲ್ಲ.

'ಕರ್ಮಾರ್ಥದಲ್ಲಿ' ಎಂದು ಷಷ್ಠಿ ವಿಹಿತವಾಗಿದೆ ಎಂಬ ಸಮಸ್ಯೆಗೆ ಹೀಗೆ ಉತ್ತರ - 'ಅಕಾಕಾರಯೋಃ ಪ್ರಯೋಗೇ ನೇತಿ ವಕ್ತವ್ಯಂ' ಎಂಬ ವಾರ್ತಿಕದಂತೆ 'ಅಕ' ಮತ್ತು 'ಅ' ಪ್ರತ್ಯಯ ಸ್ಥಳಗಳಲ್ಲಿ 'ಉಭಯಪ್ರಾಪ್ತೌ ಕರ್ಮಣಿ' ಎಂಬ ಸೂತ್ರದಂತೆ ಕರ್ಮಷಷ್ಠಿ ಬರುವುದು ನಿಷಿದ್ಧವಾಗಿದೆ. ಪ್ರಕೃತದಲ್ಲಿ 'ಜಿಜ್ಞಾಸಾ' ಶಬ್ದ ಸನ್ ಪ್ರತ್ಯಯಾಂತವಾದ 'ಜಿಜ್ಞಾಸ' ಶಬ್ದದ ಮೇಲೆ 'ಅ' ಪ್ರತ್ಯಯ ಬಂದು ಸಿದ್ಧವಾಗಿರುವುದರಿಂದ 'ಉಭಯಪ್ರಾಪ್ತೌ ಕರ್ಮಣಿ' ಸೂತ್ರವಿಹಿತವಾದ ಷಷ್ಠಿ ಬರುವುದಿಲ್ಲ. 'ಕರ್ತೃಕರ್ಮಣೋಃ ಕೃತಿ' ಎಂದೇ ಷಷ್ಠಿ ಬಂದಿದೆ. ಆದರಿಂದ 'ಕರ್ಮಣಿ ಚ' ಎಂದು ಷಷ್ಠೀಸಮಾಸ ನಿಷೇಧವಿಲ್ಲ. 'ಕೃದ್ಯೋಗ ಲಕ್ಷಣಾ ಷಷ್ಠೀ ಸಮಸ್ಯತೇ' ಎಂದು ಪ್ರತಿಪ್ರಸವವಿರುವುದರಿಂದ 'ಪ್ರತಿಪದವಿಧಾನ ಷಷ್ಠೀ ನ ಸಮಸ್ಯತೇ' ಎನ್ನುವ ನಿಷೇಧವೂ ಅನ್ವಯಿಸುವುದಿಲ್ಲ.

## 'ಜಿಜ್ಞಾಸಾ' ಶಬ್ದಾರ್ಥ - ಸ್ವಮತದಲ್ಲಿ

ಟೀಕೆಯಲ್ಲಿ ಶ್ರವಣಮನನ ನಿದಿಧ್ಯಾಸನ ಇವು ಮೂರು ಜಿಜ್ಞಾಸೆಯೆ ಎಂದಿದೆ. ಸುಧೆಯಲ್ಲಿ ಮನನವೇ ಜಿಜ್ಞಾಸೆ ಎಂದಿದೆ. ಇವುಗಳ ವಿರೋಧ ಪರಿಹಾರಕ್ಕೆ ಹೀಗೆ ಹೇಳಬೇಕು - 'ಜಿಜ್ಞಾಸೆ' ಎಂದರೆ ಶ್ರವಣ ಮುಂತಾದ ಮೂರರಲ್ಲಿಯೂ ಹಾಸು ಹೊಕ್ಕಾಗಿರುವ ಉಪಾಸನೆ, ಅಂದರೆ ಭಗವಂತನಲ್ಲಿ ಮನಸ್ಸಿನ ಏಕಾಗ್ರತೆ. ಇದು ನಿದಿಧ್ಯಾಸನದಲ್ಲಿ ಸ್ವತಃ ಇದೆ. ಶ್ರವಣ ಮನನಗಳಲ್ಲಿ ಪ್ರಮಾಣಗಳ ಮೂಲಕ ಇದೆ ಎಂಬುದು ಟೀಕೆಯ ಅಭಿಪ್ರಾಯ. ಇದು ಸುಧೆಗೂ ಸಂಮತವೆ. ಆದರೆ ಶಾಸ್ತ್ರದ ಅವಶ್ಯಕತೆಯನ್ನು ಸಮರ್ಥಿಸಲು ಮನನ ರೂಪದ ಉಪಾಸನೆಯ ಅವಶ್ಯಕತೆಯನ್ನು ಸಮರ್ಥಿಸಿದರೆ ಸಾಕು ಎಂದು ಸುಧೆ ಅಭಿಪ್ರಾಯಪಡುತ್ತದೆ.

ಜಿಜ್ಞಾಸಾ ಶಬ್ದವು ಜ್ಞಾಧಾತುವಿಗೆ ಇಚ್ಛೆ ಎಂಬ ಅರ್ಥದ 'ಸನ್' ಪ್ರತ್ಯಯ ಸೇರಿ ನಿಷ್ಪನ್ನವಾಗಿದ್ದರೂ ಆ ಶಬ್ದದಿಂದ ಮೊದಲಿಗೆ ವಿಚಾರ ಎಂಬ ಅರ್ಥವೇ ಹೊಳೆಯುತ್ತದೆ ಹೊರತು ಜ್ಞಾನೇಚ್ಛೆಯಲ್ಲ. ಅದರಿಂದಲೆ ಎಲ್ಲ ಸೂತ್ರಕಾರರೂ ಧರ್ಮಜಿಜ್ಞಾಸಾ ಬ್ರಹ್ಮಜಿಜ್ಞಾಸಾ ಎಂದು 'ಜಿಜ್ಞಾಸಾ' ಶಬ್ದವನ್ನೆ ಬಳಸುತ್ತಾರೆ. ಅದೇ ಅರ್ಥದ 'ಬುಭುತ್ಸಾ' ಶಬ್ದವನ್ನಲ್ಲ. ಏಕೆ? ಎಂಬ ಪ್ರಶ್ನೆಗೆ, ಬುಭುತ್ಸಾ ಶಬ್ದವನ್ನು ಹೇಳಿದರೆ ಮೊದಲಿಗೆ ಜ್ಞಾನೇಚ್ಛೆ ಎಂಬ ಅರ್ಥ ಹೊಳೆಯುತ್ತದೆ ಹೊರತು ವಿಚಾರವೆಂಬ ಅರ್ಥವಲ್ಲ ಎಂದೇ ಉತ್ತರಿಸಬೇಕು. ಅದರಿಂದ ಜಿಜ್ಞಾಸಾಶಬ್ದಕ್ಕೆ ವಿಚಾರ ಎಂಬ ಅರ್ಥದಲ್ಲಿ ರೂಢಿ ಎಂದು ಒಪ್ಪಬೇಕು. ಲಕ್ಷಣೆ ಎಂದಲ್ಲ.

## ಬ್ರಹ್ಮಸೂತ್ರದಲ್ಲಿ ವಿಚಾರಾಂಶ

ಎಲ್ಲ ವೇದಗಳ ವಿಚಾರವೂ ಬ್ರಹ್ಮಸೂತ್ರದಲ್ಲಿ ಬರಬೇಕು. ಕೇವಲ ಜ್ಞಾನಕಾಂಡ ವಿಚಾರವಲ್ಲ, ಆದರೆ ಮುಖ್ಯ ತಾತ್ಪರ್ಯವಾದ ಭಗವಂತನ ವಿಚಾರ ಇಲ್ಲಿ ಹೊಸತು. ಅವಾಂತರ ತಾತ್ಪರ್ಯಗೋಚರವಾದ ಕರ್ಮ ದೇವತಾ ವಿಚಾರಗಳು ಮಾತ್ರ ಕರ್ಮಮೀಮಾಂಸಾ ದೈವೀ ಮೀಮಾಂಸಾಗಳಲ್ಲಿ ಆಗಿರುತ್ತವೆ. ಇಷ್ಟು ಜಿಜ್ಞಾಸಾಧಿಕರಣದ ಸಾರಾಂಶ

- ವಿದ್ವಾನ್ ಹಯವದನ ಪುರಾಣಿಕರು

# ಜನ್ಮಾದ್ಯಧಿಕರಣ

## ಗುಣಪೂರ್ಣತ್ವದ ಸಮರ್ಥನೆಗಾಗಿ ಜನ್ಮಾದ್ಯಧಿಕರಣ

ಜನ್ಮಾದ್ಯಧಿಕರಣವು ಪ್ರಾರಂಭವಾಗುತ್ತಿದೆ. ಗುಣಪೂರ್ಣನಾದ್ದರಿಂದ ಬ್ರಹ್ಮನ ಜಿಜ್ಞಾಸೆಯನ್ನು ಅವಶ್ಯ ಆಚರಿಸಬೇಕೆಂದು ಜಿಜ್ಞಾಸಾಧಿಕರಣದಲ್ಲಿ ತೀರ್ಮಾನಿಸಿದ್ದಾಯಿತು. ಆ ಗುಣಪೂರ್ಣತ್ವವನ್ನು ಸಮರ್ಥಿಸಲು ಸೃಷ್ಟ್ಯಾದ್ಯಷ್ಟಕರ್ತೃತ್ವವನ್ನು ಸಮರ್ಥಿಸಬೇಕಾಗಿದೆ. ಅದಕ್ಕಾಗಿಯೇ ಈ ಅಧಿಕರಣ ಹೊರಟಿದೆ. ಇದರಿಂದ ಬ್ರಹ್ಮನು ಜೀವನಿಗಿಂತ ಭಿನ್ನನೂ ಉತ್ತಮನೂ ಆಗಿದ್ದಾನೆಂದು ನಿರ್ಣಯವಾಗುತ್ತದೆ.

ಜಿಜ್ಞಾಸಾಧಿಕರಣದಿಂದ ಜನ್ಮಾದ್ಯಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ಅಥವಾ ಪ್ರಪಂಚ್ಯಪ್ರಪಂಚಕ- ಭಾವಸಂಗತಿಯನ್ನು ತಿಳಿಯಬೇಕು.

## ಸಂಶಯ ಹಾಗೂ ಪೂರ್ವಪಕ್ಷ

'ಯತೋ ವಾ' ಎಂಬ ವಾಕ್ಯದಲ್ಲಿರುವ ಜಗತ್ಕಾರಣತ್ವವು ಜೀವನಲ್ಲಿ ಸಿದ್ಧವಾದರೆ ಬ್ರಹ್ಮಶಬ್ದವು ಜೀವನಲ್ಲಿ ಸ್ವರಸವಾಗಿ ಉಪಪನ್ನವಾಗುತ್ತದೆ. ಆವಾಗ ಯೋಗಾರ್ಥನಾದ ವಿಷ್ಣುವನ್ನು ವಿವಕ್ಷಿಸಲು ಕಾರಣವಿಲ್ಲ. ರೂಢಿಯಿಂದ ಜೀವನೇ ಬ್ರಹ್ಮನೆನಿಸುತ್ತಾನೆಂಬದು ಪೂರ್ವಪಕ್ಷದ ಗುರಿ.

'ಯತೋ ವಾ' ಎಂಬ ವಾಕ್ಯದಲ್ಲಿರುವ ಜಗತ್ಕಾರಣತ್ವವು ಜೀವನಲ್ಲಿ ಕೂಡುವುದಿಲ್ಲ. ಆದ್ದರಿಂದ ಬ್ರಹ್ಮಶಬ್ದಕ್ಕೆ ಜೀವನೆಂಬ ಅರ್ಥ ಸ್ವರಸವಾಗುವುದಿಲ್ಲ. ಆವಾಗ ರೂಢ್ಯರ್ಥನಾದ ಜೀವನನ್ನು ಬಿಡಲು ಕಾರಣವಿದೆ. ಬ್ರಹ್ಮಶಬ್ದದಿಂದ ವಿಷ್ಣುವೇ ಪ್ರತಿಪಾದ್ಯನಾಗುತ್ತಾನೆಂಬುದು ಸಿದ್ಧಾಂತದ ಗುರಿ.

ಪೂರ್ವಪಕ್ಷ - ಕೋಶ ಹೇಳುವಂತೆ ಬ್ರಹ್ಮಶಬ್ದದಿಂದ ಜೀವನೇ ಪ್ರತಿಪಾದ್ಯನು ಯೋಗವು ರೂಢಿಗಿಂತ ದುರ್ಬಲವಾಗಿದೆಯೆಂದು ಪೂರ್ವಮೀಮಾಂಸೆಯ ರಥಕಾರಾಧಿಕರಣದಲ್ಲಿ ಸಿದ್ಧವಾಗಿದೆ. ಯೋಗಾರ್ಥವನ್ನು ಇಟ್ಟುಕೊಂಡು ರೂಢ್ಯರ್ಥವನ್ನು ತಿರಸ್ಕರಿಸಬೇಕಾದರೆ ಪ್ರಮಾಣವಿರಬೇಕು. ಆದರೆ ಅಂತಹ ಪ್ರಮಾಣವೇನು ಇಲ್ಲಿ ಕಾಣುವುದಿಲ್ಲ.

## ಬ್ರಹ್ಮಶಬ್ದಪ್ರತಿಪಾದ್ಯ ಜೀವನೆನ್ನಲು ರೂಢಿಪ್ರಮಾಣ

ಇನ್ನು ವಿಷ್ಣುವಿನಲ್ಲಿ ಬ್ರಹ್ಮಶಬ್ದದ ರೂಢಿಯನ್ನು ಹೇಳಲಾಗದು. ಹಾಗಾದಲ್ಲಿ ಯೋಗದಿಂದ ಲಭಿಸುವ ಗುಣಪೂರ್ಣತ್ವವೇ ಸಿದ್ಧವಾಗುತ್ತಿರಲಿಲ್ಲ. ರೂಢಿಯ ಜೊತೆ ಯೋಗವನ್ನು ಹೇಳಿದಾಗ ಈ ಸಮಸ್ಯೆ ಪರಿಹಾರವಾಗಬಹುದು. ಆದರೆ ಅದಕ್ಕೆ ಆಧಾರವಿಲ್ಲ. ಪಂಕಜಾದಿಶಬ್ದಗಳಲ್ಲಿ ಯೋಗರೂಢಿಯನ್ನೂ ಒಪ್ಪುವುದು ಅನಿವಾರ್ಯ. ಕೇವಲ ಯೋಗವನ್ನು ಒಪ್ಪಿದರೆ ಕಪ್ಪೆ ಮೊದಲಾದವುಗಳಲ್ಲಿ ಅತಿಪ್ರಸಂಗ ಬರುವುದರಿಂದ ರೂಢಿಯನ್ನು ಒಪ್ಪಬೇಕಾಗುತ್ತದೆ. ಆದರೆ ವಿಷ್ಣುವಿನಲ್ಲಿ ಬ್ರಹ್ಮಶಬ್ದದ ಯೋಗಾರ್ಥ ಒಪ್ಪಿದಾಗ ಅಂತಹ ಅತಿಪ್ರಸಂಗವೇನು ಬರುವುದಿಲ್ಲ. ಹೀಗಿರುವಾಗ ಸುಮ್ಮನೆ ರೂಢಿಯನ್ನು ಏಕೆ ಒಪ್ಪಬೇಕು?

ಈ ವಿಚಾರವೆಲ್ಲವು 'ತದ್‌ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ಶ್ರುತಿಯಲ್ಲಿ ಮಾತ್ರ. 'ತದೇವ ಬ್ರಹ್ಮ' ಇತ್ಯಾದಿ ಸ್ಥಳದಲ್ಲಿ ರೂಢಿಗೆ ಬಾಧಕವಾದ ಸಮುದ್ರಶಾಯಿತ್ವಾದಿ ಲಿಂಗಗಳಿರುವುದರಿಂದ ವಿಷ್ಣುಪರವೆನ್ನಲು ಪೂರ್ವಪಕ್ಷಿಗಳಿಗೆ ಅಭ್ಯಂತರವಿಲ್ಲ.

## ಪೂರ್ವಪಕ್ಷ ನಿಜವಾಗಿಯೂ ಬರುತ್ತದೆಯೇ?

'ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬಲ್ಲಿ ಬ್ರಹ್ಮಶಬ್ದ ಜೀವನಲ್ಲೇ ರೂಢವಾಗಿದೆ. ವಿಷ್ಣುವಿನಲ್ಲಿ ಕೇವಲ ಯೋಗದಿಂದ ಇದೆ. ಯೋಗಕ್ಕಿಂತ ರೂಢಿಯು ಪ್ರಬಲವಾದ್ದರಿಂದ ಜೀವನನ್ನೇ ಸ್ವೀಕರಿಸಬೇಕೆಂಬ ಪೂರ್ವಪಕ್ಷ ನಡೆಯುತ್ತಿದೆ.

ಇಲ್ಲಿ ಒಂದು ಸಂದೇಹ - ಬ್ರಹ್ಮಶಬ್ದದ ರೂಢಿಯನ್ನು ಜೀವನಲ್ಲಿ ಹೇಗೆ ಹೇಳುತ್ತೀರಿ? 'ತದ್‌ವಿಜಿಜ್ಞಾಸಸ್ವ' ಎಂದು ಜಿಜ್ಞಾಸ್ಯತ್ವವು ಬ್ರಹ್ಮನಲ್ಲಿ ಕೇಳಿಸುತ್ತಿದೆ. ಜೀವನೇ ಬ್ರಹ್ಮನಾದಲ್ಲಿ ಜಿಜ್ಞಾಸ್ಯತ್ವ ಕೂಡುವುದಿಲ್ಲ. ಜೀವನು 'ಅಹಂ' ಎಂದು ನಿತ್ಯಸಿದ್ಧನಾದ್ದರಿಂದ ಸಂದಿಗ್ಧನಾಗಿಲ್ಲ. ಆದ್ದರಿಂದಲೇ ಜಿಜ್ಞಾಸ್ಯನೂ ಆಗಲಾರ. ಹೀಗೆ ರೂಢಿಗೆ ಬಾಧಕವಿರುವುದರಿಂದ ಯೋಗವನ್ನೇ ಆಶ್ರಯಿಸ ಬೇಕಲ್ಲವೇ?

ಈ ಸಂದೇಹಕ್ಕೆ ಅವಕಾಶವಿಲ್ಲ - ಜೀವನು ಸ್ವಪ್ರಕಾಶನಾದ್ದರಿಂದ ನಿತ್ಯಸಿದ್ಧನಾಗಿದ್ದರೂ ದೇಹಕ್ಕಿಂತ ಭಿನ್ನನಾಗಿದ್ದಾನೋ, ಅಭಿನ್ನನಾಗಿದ್ದಾನೋ ನಿತ್ಯನೋ, ಅನಿತ್ಯನೋ? ಅಣುನೋ, ವ್ಯಾಪ್ತನೋ? ಹೀಗೆ ಅನೇಕ ಪ್ರಕಾರಗಳಲ್ಲಿ ಜೀವನ ಬಗ್ಗೆ ಸಂದೇಹವಿರುವುದರಿಂದ ಜೀವನು ಜಿಜ್ಞಾಸ್ಯನೇ ಆಗುತ್ತಾನೆ.

ಹಾಗಾದರೆ ಈ ಅಧಿಕರಣದಲ್ಲಿ ಜಿಜ್ಞಾಸೆಯನ್ನು ಆಕ್ಷೇಪ ಮಾಡಿಕೊಂಡೇ ಪೂರ್ವಪಕ್ಷ ಮಾಡಲಾಗಿದೆ - ಹಿಂದಿನ ಅಧಿಕರಣದಲ್ಲಿ ಜಿಜ್ಞಾಸೆಯನ್ನು ಮಾಡಬೇಕೆಂದು ಹೇಳಿದ್ದಿರಿ. ಆದರೆ ಆ ಜಿಜ್ಞಾಸೆಯು ಕೂಡುವುದಿಲ್ಲ. ಏಕೆಂದರೆ 'ತದ್‌ಬ್ರಹ್ಮ' ಎಂಬಲ್ಲಿ ಬ್ರಹ್ಮಶಬ್ದಕ್ಕೆ ಜೀವ ಎಂದರ್ಥ. ಜೀವನ ಜಿಜ್ಞಾಸೆಯಂತೂ ಕೂಡುವುದಿಲ್ಲ. ಹೀಗೆ ಜಿಜ್ಞಾಸೆಯ ಆಕ್ಷೇಪವೇ ಈ ಅಧಿಕರಣದ ಪೂರ್ವಪಕ್ಷದ ಫಲ. ಹೀಗಿರುವಾಗ ನೀವು ಜೀವನು ದೇಹಕ್ಕಿಂತ ಭಿನ್ನನೋ? ಅಭಿನ್ನನೋ? ಎಂದು ಜಿಜ್ಞಾಸ್ಯನಾಗಿದ್ದಾನೆಂದು ಹೇಳಿದರೆ ಆವಾಗ ಈ ಅಧಿಕರಣದ ಪೂರ್ವಪಕ್ಷವೇ ಹೊರಡಲು ಸಾಧ್ಯವಿಲ್ಲ. ಹಿಂದಿನ ಅಧಿಕರಣದಲ್ಲಿ ಹೇಳಿದ ಜಿಜ್ಞಾಸೆಯನ್ನು ತಪ್ಪೆಂದು ಆಕ್ಷೇಪಿಸಲು ಸಾಧ್ಯವಿಲ್ಲ.

ಹಿಂದಿನ ಸೂತ್ರದಲ್ಲಿ ಶಮದಮಾದಿಸಂಪನ್ನನಾದ ಅಧಿಕಾರಿಯು ಮೋಕ್ಷವೆಂಬ ಫಲಕ್ಕೋಸ್ಕರ ಜೀವಾನ್ಯನಾದ ವಿಷ್ಣುವಿನ ಜಿಜ್ಞಾಸೆಯನ್ನು ಮಾಡಬೇಕೆಂದಷ್ಟೇ ಹೇಳಿದರು. ಆದರೆ 'ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದಕ್ಕೆ ರೂಢಿಯಿಂದ ಜೀವನೆಂದರ್ಥ. ಜೀವನ ಜಿಜ್ಞಾಸೆಯನ್ನು ಶ್ರುತಿಯು ಹೇಳುತ್ತಿರುವಾಗ ವಿಷ್ಣುವಿನ ಜಿಜ್ಞಾಸೆಯನ್ನು ಮಾಡಬೇಕೆಂದು ಹಿಂದಿನ ಸೂತ್ರದಲ್ಲಿ ಹೇಳಿದ್ದು ಸರಿಯಿಲ್ಲ. ಹೀಗೆ ಪೂರ್ವಾಧಿಕರಣದಲ್ಲಿ ಹೇಳಿದ ವಿಷ್ಣುಜಿಜ್ಞಾಸೆಯನ್ನು ಈ ಅಧಿಕರಣದಲ್ಲಿ ಆಕ್ಷೇಪ ಮಾಡಲಾಗಿದೆ. ಹೊರತು ಜೀವನ ಜಿಜ್ಞಾಸೆಯನ್ನು ಆಕ್ಷೇಪ ಮಾಡುತ್ತಿಲ್ಲ. ಈ ರೀತಿಯಾಗಿ ಒಂದೇ ಅಭಿಪ್ರಾಯದಿಂದ ಟೀಕೆ ಹಾಗು ಸುಧೆಯ ಮಾತುಗಳು ಹೊರಟಿವೆ. ಆದ್ದರಿಂದ ಟೀಕಾದ್ವಯಗಳ ಪರಸ್ಪರವಿರೋಧವೂ ಪರಿಹಾರವಾಗುತ್ತದೆ.

## ಎರಡು ಬಗೆಯಲ್ಲಿ ಟೀಕಾದ್ವಯಗಳ ವಿರೋಧ ಪರಿಹಾರ

## ಜೀವನು ಬ್ರಹ್ಮಶಬ್ದಪ್ರತಿಪಾದ್ಯನೆನ್ನಲು ಜಗತ್ಕಾರಣತ್ವ ಬಾಧಕವಲ್ಲ

'ತದ್‌ವಿಜಿಜ್ಞಾಸ್ವ ತದ್‌ಬ್ರಹ್ಮ' ಎಂಬಲ್ಲಿರುವ ಬ್ರಹ್ಮಪದದಿಂದ ವಾಚ್ಯನಾದವನು ಜೀವನೆಂದು ಹೇಳಿದರೆ ಏನೂ ಬಾಧಕವಿಲ್ಲ. 'ಯತೋ ವಾ' ಎಂಬ ಹಿಂದಿನ ವಾಕ್ಯದಲ್ಲಿ ಜಗತ್ಕಾರಣನ ಬಗ್ಗೆ ಹೇಳಿದ್ದರಿಂದ ಮುಂದಿನ ಈ ವಾಕ್ಯದಲ್ಲಿ ಜೀವನು ಹೇಗೆ ಪ್ರತಿಪಾದ್ಯನಾಗುತ್ತಾನೆ? ಎಂಬ ಗೊಂದಲ ಸಹಜ. ಆದರೆ ಜಗತ್ಕಾರಣನು ಜೀವನೇ ಏಕಾಗಬಾರದು? ಎಂಬುದು ಪೂರ್ವಪಕ್ಷಿಗಳ ವಾದ. ಏಕೆಂದರೆ ಜೀವನ ಅದೃಷ್ಟದಿಂದ ಘಟಪಟಾದಿ ಜಗತ್ತು ನಿರ್ಮಾಣವಾಗಿದೆ. ಅಥವಾ ಜೀವನು ಮಿಥ್ಯಾಭೂತವಾದ ಜಗತ್ತನ್ನು ಕಲ್ಪಿಸಿದ್ದರಿಂದಲೂ ಜಗತ್ಕಾರಣತ್ವ ಜೀವನಲ್ಲಿ

ಬರುತ್ತದೆ. ಬಹಳ ವಿಶಾಲವಾದ ಜಗತ್ಕಾರಣತ್ವವನ್ನು ಜೀವನಲ್ಲಿ ಹೇಳಬೇಕಾಗಿಲ್ಲ. ಕಣ್ಣಿಗೆ ಕಾಣಿಸುವ ಘಟಪಟಾದಿಗಳ ಕಾರಣತ್ವ ಹೇಳಿದರೆ ಸಾಕು. ಆವಾಗ ಶ್ರುತಿಯಲ್ಲಿರುವ 'ಇಮಾನಿ' ಎಂಬ ಪದಪ್ರಯೋಗವೂ ಸಾಧುವಾಗುತ್ತದೆ. ಜೀವನನ್ನೇ ಇಲ್ಲಿ ವಿವಕ್ಷಿಸಲು ಆತ್ಮಾ ದ್ರಷ್ಟವ್ಯಃ ಎಂಬಲ್ಲಿರುವ ಆತ್ಮಪದವು ಸಹಕರಿಸುತ್ತದೆ. ಇಷ್ಟೆಲ್ಲ ಕಾರಣಗಳಿಂದ ಬ್ರಹ್ಮಶಬ್ದಪ್ರತಿಪಾದ್ಯನು ಜೀವನೇ ಆಗುತ್ತಾನೆ. ಮತ್ತೊಂದು ಸ್ವಾರಸ್ಯ-ಪರಬ್ರಹ್ಮನಲ್ಲಿ ಜಗತ್ಕಾರಣತ್ವ ಹೇಳಲು ಬರುವುದೇ ಇಲ್ಲ. ಏಕೆಂದರೆ ಅವನು ನಿಷ್ಕ್ರಿಯನಾದ್ದರಿಂದ ನಿಮಿತ್ತಕಾರಣನಾಗಲಾರ. ನಿರ್ವಿಕಾರನಾದ್ದರಿಂದ ಉಪಾದಾನಕಾರಣನೂ ಆಗಲಾರ.

## ಸಿದ್ಧಾಂತ

ಜನ್ಮಾಧಿಕರಣದ ಸಿದ್ಧಾಂತ - 'ಯ ಉ ತ್ರಿಧಾತು' ಇತ್ಯಾದಿ ಶ್ರುತಿಗಳಿಂದ ಜಗತ್ಕಾರಣತ್ವವು ವಿಷ್ಣುವಿನಲ್ಲಿ ಮಾತ್ರ ಇರುವುದೆಂದು ನಿಶ್ಚಯವಾಗಿದೆ. ಈ ಜಗತ್ಕಾರಣತ್ವವನ್ನೇ 'ಯತೋ ವಾ' ಎಂಬ ಶ್ರುತಿಯು ಜಿಜ್ಞಾಸ್ಯನಲ್ಲಿ ಹೇಳುತ್ತಿದೆ. ಜೀವನು ಜಗತ್ಕಾರಣನಾಗಲಾರದ ಕಾರಣ ಬ್ರಹ್ಮಶಬ್ದ ಪ್ರತಿಪಾದ್ಯನಾಗುವುದಿಲ್ಲ. ಅದೃಷ್ಟದ ಮುಖಾಂತರ ಜಗತ್ಕಾರಣನಾಗಿದ್ದಾನೆಂಬುದು ಅರ್ಥವಿಲ್ಲದ ಮಾತು. ಮತ್ತು ಇತರವ್ಯಪದೇಶಾಧಿಕರಣದಲ್ಲಿ ಜೀವನಿಗೆ ಕರ್ತೃತ್ವವನ್ನೇ ನಿಷೇಧಿಸಿರುವುದರಿಂದ ಜಗತ್ಕಾರಣತ್ವವನ್ನು ಸುತರಾಂ ಹೇಳಲು ಸಾಧ್ಯವಿಲ್ಲ. ವಿಷ್ಣುವಿಗೆ ಜಗತ್ಕಾರಣತ್ವ ಹೇಳಲು ನಿಷ್ಕ್ರಿಯತ್ವಶ್ರುತಿವಿರೋಧವೂ ಬರುವುದಿಲ್ಲ. ಶ್ರಮರಹಿತವಾಗಿ ಕೆಲಸ ಮಾಡುತ್ತಾನೆಂದಷ್ಟೇ ಅದರರ್ಥ. ಅಷ್ಟೇ ಅಲ್ಲದೇ 'ಸಹಿಕರ್ತಾ' 'ಸತ್ಯಕರ್ಮಾ' ಇತ್ಯಾದಿ ಶ್ರುತಿಗಳು ಸ್ಪಷ್ಟವಾಗಿ ಜಗತ್ಕಾರಣತ್ವವನ್ನು ಅವನಲ್ಲಿ ಹೇಳುತ್ತಿದ.

## 'ಯತೋ ವಾ' ಎಂಬ ಶ್ರುತಿ ಸಮಸ್ತಜಗತ್ಕಾರಣತ್ವವನ್ನೇ ಹೇಳುತ್ತಿದೆ

'ಯತೋ ವಾ' ಎಂಬ ಶ್ರುತಿಯು ಅನುವಾದಕವೆಂದು ಒಪ್ಪೋಣ. ಅಂದ ಮಾತ್ರಕ್ಕೆ ಪ್ರತ್ಯಕ್ಷದಿಂದ ತೋರುತ್ತಿರುವ ಕೆಲವು ಪದಾರ್ಥಗಳ ಕಾರಣತ್ವವನ್ನಷ್ಟೇ ಅನುವಾದ ಮಾಡುತ್ತಿದೆಯೆಂದು ಒಪ್ಪಬೇಕಿಲ್ಲ. ಹೊರತಾಗಿ ಬೇರೆಲ್ಲಾ ಶ್ರುತಿಗಳಲ್ಲಿ ಹೇಳುತ್ತಿರುವ ಸಮಸ್ತಜಗತ್ಕಾರಣತ್ವವನ್ನೇ ಅನುವಾದ ಮಾಡುತ್ತಿದೆ ಎನ್ನಬೇಕು. ಶಾಸ್ತ್ರೀಯವಾಕ್ಯಗಳು ಶಾಸ್ತ್ರವ್ಯವಹಾರವನ್ನೇ ಅನುಸರಿಸಬೇಕಲ್ಲವೇ?

## ರೂಢಿಯ ಜೊತೆ ಯೋಗವನ್ನೂ ಒಪ್ಪೋಣ

'ತದೇವ ಪರಮಂ ಬ್ರಹ್ಮ' ಎಂಬ ಶ್ರುತಿಯು ವಿಷ್ಣುವಿನಲ್ಲಿ ಬ್ರಹ್ಮಶಬ್ದದ ರೂಢಿಯನ್ನು ಹೇಳುತ್ತಿದೆ. 'ಬೃಹಂತೋ ಹಿ' ಎಂಬ ಶ್ರುತಿಯು ಯೋಗವನ್ನು ಹೇಳುತ್ತಿದೆ. ಯೋಗ ಹಾಗೂ ರೂಢಿ ಎರಡನ್ನೂ ಒಪ್ಪಿದರೆ ತಪ್ಪೇನಿಲ್ಲ. ಯೋಗವನ್ನು ಒಪ್ಪಿದಾಗ ಅತಿಪ್ರಸಂಗ ಬಂದರೆ ಮಾತ್ರ ರೂಢಿಯನ್ನು ಒಪ್ಪಬೇಕೆಂದೇನು ಶ್ರಾದ್ಧ ನಿಯಮವಿಲ್ಲ. ಪಂಕಜಪದಕ್ಕೆ ರೂಢ್ಯರ್ಥ ಒಪ್ಪಿದಾಗ ಬಾಧಕವಿಲ್ಲದಿದ್ದರೂ ಯೋಗಾರ್ಥವನ್ನು ಒಪ್ಪುವುದು ಕಂಡಿದೆ. ಶ್ರುತಿಯಲ್ಲಿರುವ 'ಆಹುಃ' ಎಂಬ ಪದವು ಪ್ರಯೋಗಬಾಹುಲ್ಯ ರೂಪವಾದ ರೂಢಿಯನ್ನು ಹೇಳುತ್ತಿದೆ. ಸಮುದಾಯಶಕ್ತಿಯನ್ನೇ ರೂಢಿಯೆಂದು ಕರೆದರೂ ನಮಗೇನು ಬಾಧಕವಿಲ್ಲ. ಶ್ರುತಿಸ್ಮೃತಿಗಳು ವಿಷ್ಣುವನ್ನೇ ಬ್ರಹ್ಮನೆಂದು ಕರೆಯುವುದರಿಂದ ಸಮುದಾಯಶಕ್ತಿಯನ್ನು ಹೇಳಬಹುದು.

## ವಿದ್ವದ್ರೂಢಿಯು ಅತ್ಯಂತ ಶ್ರೇಷ್ಠ

ಬ್ರಹ್ಮ ಶಬ್ದಕ್ಕೆ ಜೀವ ಹಾಗು ಬ್ರಹ್ಮ ಇಬ್ಬರಲ್ಲಿಯೂ ರೂಢಿಯಿದೆ. ಆದರೆ ಬ್ರಹ್ಮನಲ್ಲಿ ವಿದ್ವದ್ರೂಢಿಯಿಂದ ಜೀವನಲ್ಲಿ ಅವಿದ್ವದ್ರೂಢಿಯಿಂದ ಇರುತ್ತದೆ. ವಿದ್ವದ್ರೂಢಿಯೇ ಇವೆರಡಲ್ಲಿ ಶ್ರೇಷ್ಠವೆಂದು ಯವಮಯಾಧಿಕಾರಣದಲ್ಲಿ

ನಿರ್ಣಯಿಸಿದ್ದಾರೆ. ಆದರೆ ವಿದ್ವಾಂಸರ ಪ್ರಸಿದ್ಧಿವಿರೋಧ ಬಾರದಿದ್ದರೆ ಅವಿದ್ವದ್ರೂಢಿಯನ್ನು ಸ್ವೀಕರಿಸಬಹುದೆನ್ನಲು ಪೂರ್ವಮೀಮಾಂಸೆಯ ಪಿಕನೇಮಾಧಿಕರಣದ ದೃಷ್ಟಾಂತವಿದೆ. ಮತ್ತು ಸ್ಮೃತಿಸಮ್ಮತಿಯಿದ್ದಲ್ಲಿ ಅವಿದ್ವದ್ರೂಢಿಯನ್ನು ಸ್ವೀಕರಿಸಲು ಯಾವ ತೊಂದರೆಯೂ ಇರುವುದಿಲ್ಲ. ಆದರೆ ಇಲ್ಲಿ ಬ್ರಹ್ಮಶಬ್ದವನ್ನು ಜೀವನಲ್ಲಿ ಹೇಳಲು ಯಾವುದೇ ಸ್ಮೃತಿಯ ಅನುಗ್ರಹವೂ ಇರುವುದಿಲ್ಲ. ಹೊರತಾಗಿ 'ತದೇವ' ಎಂಬ ಶ್ರುತಿಯ ವಿರೋಧವೇ ಬರುತ್ತದೆ.

ಇನ್ನು ವಿದ್ವದ್ರೂಢಿ ಅವಿದ್ವದ್ರೂಢಿಗಳಲ್ಲಿ ತಾರತಮ್ಯ ಹೇಳುತ್ತಿರುವುದು ಹೇಗೆ ಸರಿ? ಎಂಬ ಪ್ರಶ್ನೆ ಬರುತ್ತದೆ. ಆದರೆ ಗೌಣೀವೃತ್ತಿ ಲಕ್ಷಣಾವೃತ್ತಿಗಳಲ್ಲಿಯೂ ತಾರತಮ್ಯವನ್ನು ತಾರ್ಕಿಕರೂ ಹೇಳಿದ್ದಾರೆ. ಮೀಮಾಂಸಕರೂ ಸಹ ಲಕ್ಷಣಾ ಒಂದರಲ್ಲೇ ತಾರತಮ್ಯ ಒಪ್ಪಿದ್ದಾರೆ. ಮತ್ತು ಯೋಗಕ್ಕಿಂತ ರೂಢಿಯು ಪ್ರಬಲವೆಂದು ಎಲ್ಲರೂ ಒಪ್ಪಿದ್ದಾರೆ. ಅದರಂತೆ ಕೇವಲ ರೂಢಿಯಲ್ಲಿ ತಾರತಮ್ಯ ಒಪ್ಪಿದರೆ ಏನೂ ಬಾಧಕವಿಲ್ಲ.

## ಸುಧೆಯ ಪ್ರಕಾರ ವಿಷಯ ಪೂರ್ವಪಕ್ಷಗಳು

ಎಲ್ಲಾ ಶ್ರುತಿಗಳಲ್ಲಿರುವ ಬ್ರಹ್ಮಶಬ್ದದ ತಾತ್ಪರ್ಯಾರ್ಥವನ್ನು ಸುಧೆಯಲ್ಲಿ ವಿಚಾರ ಮಾಡಿದ್ದಾರೆ. ಆದರೆ ತತ್ವಪ್ರಕಾಶಿಕೆಯಲ್ಲಿ 'ತದ್ ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವನ್ನು ಮಾತ್ರ ವಿಚಾರ ಮಾಡಿದ್ದಾರೆ. ವಸ್ತುತಃ ಸುಧೆಯಲ್ಲಿ 'ತದ್‌ಬ್ರಹ್ಮೇತ್ಯಯಂ ಬ್ರಹ್ಮಶಬ್ದಃ' ಎಂದು ಸಂಶಯಧರ್ಮಿಯನ್ನು ತೋರಿಸಿದ್ದರಿಂದ ಸುಧೆಯ ಪ್ರಕಾರವೂ 'ತದ್‌ಬ್ರಹ್ಮ' ಎಂಬುದೇ ವಿಷಯವಾಕ್ಯವೆಂಬ ಭ್ರಾಂತಿ ಬರುತ್ತದೆ. ಆದರೆ ಹಿಂದಿನ ಅಧಿಕರಣದ ಸಿದ್ಧಾಂತವನ್ನು ಆಕ್ಷೇಪ ಮಾಡಿಕೊಳ್ಳಲಷ್ಟೇ ಆ ವಾಕ್ಯ ಹೊರಟಿದೆ.

## ಸುಧೆಯ ಪ್ರಕಾರ ಸಿದ್ಧಾಂತ

ಸುಧೆಯಲ್ಲಿ ಮಾಡಿದ ಸಿದ್ಧಾಂತವೂ ಸಹ ವಿಭಿನ್ನವಾಗಿದೆ - ಸ್ವರ್ಗಶಬ್ದಕ್ಕೆ ಪ್ರಸಿದ್ಧಾರ್ಥವನ್ನು ತ್ಯಾಗಮಾಡಿ ಅಪ್ರಸಿದ್ಧಾರ್ಥವಾದ ಸ್ವರ್ಗಲೋಕವೆಂದು ಅರ್ಥೈಸುವಂತೆ ಬ್ರಹ್ಮಶಬ್ದಕ್ಕೂ ಸಹ ಪ್ರಸಿದ್ಧಾರ್ಥವಾದ ಜೀವಪರತ್ವವನ್ನೂ ತ್ಯಾಗ ಮಾಡಿ ಅಪ್ರಸಿದ್ಧಾರ್ಥವಾದ ವಿಷ್ಣುಪರವೆಂದು ಅರ್ಥೈಸಬೇಕು. ಅಷ್ಟೇ ಅಲ್ಲದೇ ಬ್ರಹ್ಮಶಬ್ದಕ್ಕೆ ಜೀವಪರತ್ವವನ್ನು ಹೇಳಿದರೆ 'ಯತೋ ವಾ' ಇತ್ಯಾದಿ ಶ್ರುತಿಯಲ್ಲಿ ಹೇಳಿದ ಜಗತ್‌ಕಾರಣತ್ವವೇ ಬಾಧಕವಾಗುತ್ತದೆ. ಆದ್ದರಿಂದ ವಿಷ್ಣುಪರತ್ವವನ್ನು ಒಪ್ಪಿಕೊಳ್ಳುವುದು ಅನಿವಾರ್ಯವಾದ್ದರಿಂದಲೇ ಗೌರವದೋಷವೂ ಸಹ ಬರುವುದಿಲ್ಲ. ಇಲ್ಲದಿದ್ದಲ್ಲಿ ಪ್ರಸಿದ್ಧಾರ್ಥನಾದ ಜೀವಪರತ್ವವನ್ನು ಬಿಟ್ಟು ಅಪ್ರಸಿದ್ಧಾರ್ಥಕವಾದ ವಿಷ್ಣುಪರತ್ವವನ್ನು ಒಪ್ಪಿದರೆ ಗೌರವದೋಷ ಬರುತ್ತಿತ್ತು.

## ಅನುವ್ಯಾಖ್ಯಾನದಲ್ಲಿ ಹೇಳಿದ ಪೂರ್ವಪಕ್ಷಸಿದ್ಧಾಂತಗಳು

ಅನುವ್ಯಾಖ್ಯಾನದಲ್ಲಿ ಈ ಅಧಿಕರಣದ ಪೂರ್ವಪಕ್ಷ ಸಿದ್ಧಾಂತಗಳನ್ನು ಹೀಗೆ ಹೇಳಿದ್ದಾರೆ - ಮೋಕ್ಷವನ್ನು ಕೊಡುತ್ತಾನಾದ್ದರಿಂದ ಬ್ರಹ್ಮನನ್ನು ಜಿಜ್ಞಾಸೆ ಮಾಡಬೇಕೆಂದು ಹೇಳಿದರು. ಹಾಗಾದರೆ ಸಂಸಾರವನ್ನು ಕೊಡುತ್ತಾನಾದ್ದರಿಂದ ಅವನ ಜಿಜ್ಞಾಸೆಯನ್ನು ಮಾಡಬಾರದೆಂದಾದೀತು. ಇನ್ನು ಸಂಸಾರಬಂಧನವು ಈಶ್ವರನಿಂದ ಬಂದಿದ್ದಲ್ಲ, ಬೇರೆಯವರಿಂದ ಬಂದಿದ್ದೆಂದಾಗಲೀ ಅಥವಾ ಜೀವನು ಬದ್ಧನೇ ಆಗಿಲ್ಲವೆಂದಾಗಲೀ ಹೇಳಲಾರದು. ಆದ್ದರಿಂದ ಈಶ್ವರನು ಜಿಜ್ಞಾಸ್ಯನಲ್ಲವೆಂದು ಪೂರ್ವಪಕ್ಷ. ಅಪ್ರಸನ್ನನಾದ ಈಶ್ವರನು ಬಂಧಕನಾಗಿದ್ದಾನೆ. ಅವನ ಪ್ರಸಾದಕ್ಕೋಸ್ಕರ ಜಿಜ್ಞಾಸೆಯನ್ನು ಮಾಡಬೇಕು. ಹಾಗಾಗಿ ಈಶ್ವರನಲ್ಲಿರುವ ಬಂಧಕತ್ವವು ಜಿಜ್ಞಾಸೆಗೆ ಅನುಕೂಲವೇ ಆಗಿದೆ ಹೊರತು ಪ್ರತಿಕೂಲವಾಗಿಲ್ಲ. ಜನ್ಮಾದಿಸೂತ್ರದಲ್ಲಿ ಸೃಷ್ಟ್ಯಾದಿಕರ್ತೃತ್ವವನ್ನು ಈಶ್ವರನಿಗೆ ಏಕೆ ಹೇಳಿದ್ದೆಂದರೆ ಅವನಲ್ಲಿರುವ ಮೋಚಕತ್ವವು ಅಸಂಭಾವಿತವಲ್ಲವೆಂದು ತಿಳಿಸಲು . ಇಷ್ಟು ಸಿದ್ಧಾಂತ.

# ಶಾಸ್ತ್ರಯೋನಿತ್ವಾಧಿಕರಣ

## ಸಂಗತಿ ಫಲನಿರೂಪಣೆ ಸ್ಮೃತ್ಯಧಿಕರಣದಿಂದ ಗತಾರ್ಥತ್ವಶಂಕೆ

ಶಾಸ್ತ್ರಯೋನಿತ್ವಾಧಿಕರಣವು ಪ್ರಾರಂಭವಾಗುತ್ತಿದೆ. ಜನ್ಮಾದಿಕಾರಣತ್ವವನ್ನು ವಿಷ್ಣುವಿನ ಲಕ್ಷಣವೆಂದು ಹಿಂದಿನ ಅಧಿಕರಣದಲ್ಲಿ ಸಮರ್ಥಿಸಿದ್ದಾಯಿತು. ಆ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿದೋಷವು ಬರುವುದಿಲ್ಲವೆಂದು ಸಮರ್ಥಿಸಲು ಈ ಅಧಿಕರಣ ಹೊರಟಿದೆ. ಪಂಚರಾತ್ರಾದ್ಯಾಗಮಗಳಲ್ಲಿ ವಿಷ್ಣುವನ್ನೇ ಜಗತ್‌ಕಾರಣನೆಂದು ಹೇಳಿದ್ದಾರೆ. ಆದರೆ ಪಾಶುಪತಾದ್ಯಾಗಮಗಳಲ್ಲಿ ರುದ್ರಾದಿಗಳಲ್ಲಿಯೂ ಜಗತ್ಕಾರಣತ್ವ ಹೇಳಿರುವುದರಿಂದ ವಿಷ್ಣುವಿನ ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆ. ಪಾಶುಪತಾದ್ಯಾಗಮಗಳು ದುರಾಗಮಗಳಾಗಿವೆ. ಪಂಚರಾತ್ರಾದ್ಯಾಗಮಗಳು ಸದಾಗಮಗಳಾಗಿವೆಯೆಂದು ಸಮರ್ಥಿಸಿದಾಗ ಅತಿವ್ಯಾಪ್ತಿಯು ಪರಿಹಾರವಾಗುತ್ತದೆ.

ದುರಾಗಮಗಳ ನಿರಾಸವೇ ಈ ಅಧಿಕರಣದ ಮುಖ್ಯ ಉದ್ದೇಶವಾದಲ್ಲಿ ಸ್ಮೃತ್ಯಧಿಕರಣದಿಂದ ಪುನರುಕ್ತಿ ಬರುತ್ತದೆಂಬುದು ಒಂದು ದೊಡ್ಡ ಸಮಸ್ಯೆ. ಈ ಸಮಸ್ಯೆಯನ್ನು ಬಹಳ ಸುಂದರವಾಗಿ ಇಲ್ಲಿ ಪರಿಹರಿಸಲಾಗಿದೆ. ಪುನರುಕ್ತಿಯು ಹೇಗೆ ಬರುತ್ತದೆಂದು ಮೊದಲು ವಿಚಾರಮಾಡೋಣ. ಸ್ಮೃತ್ಯಧಿಕರಣವು ಯುಕ್ತಿಪಾದದಲ್ಲಿರುವುದರಿಂದ ಯುಕ್ತಿವಿರೋಧವನ್ನು ಪರಿಹರಿಸುತ್ತಿದೆ. ಆದರೆ ಈ ಅಧಿಕರಣದಲ್ಲಿಯೂ ಅಂತಹ ಯುಕ್ತಿಗಳ ವಿರೋಧ ಪರಿಹಾರವು ಕಾಣಿಸುತ್ತಿದೆ. ಮತ್ತು ಸ್ಮೃತ್ಯಧಿಕರಣದಲ್ಲಿ ಸಮಯವಿಗಾನವು ಸಂದೇಹಬೀಜವಾಗಿರುವಂತೆ ಈ ಅಧಿಕರಣದಲ್ಲಿಯೂ ಅದೇ ಸಂದೇಹಬೀಜವಾಗಿದೆ. ಸ್ಮೃತ್ಯಧಿಕರಣದಲ್ಲಿ ದುರಾಗಮಗಳನ್ನು ಕಂಠತಃ ನಿರಾಸಮಾಡಿದ್ದಾರೆಂದೂ ಸಹ ವೈಲಕ್ಷಣ್ಯ ತೋರಿಸಲಾಗದು. ಹಾಗಾದಲ್ಲಿ ದುಷ್ಟಾನುಮಾನಗಳನ್ನು ಕಂಠತಃ ನಿರಾಸ ಮಾಡಲು ಮತ್ತೊಂದು ಅಧಿಕರಣ ಬೇಕಾದೀತು. ಮತ್ತು ಎರಡೂ ಅಧಿಕರಣಗಳಲ್ಲಿ ದುರಾಗಮ ನಿರಾಕರಣೆಯು ಇದ್ದೇ ಇರುವುದರಿಂದ ಆ ಅಂಶದಲ್ಲಿ ಪುನರುಕ್ತಿ ಪರಿಹಾರವಾಗಲು ಸಾಧ್ಯವೇ ಇಲ್ಲ. ದುರಾಗಮಗಳಲ್ಲಿ ತೋರಿಸಿದ ಪರಸ್ಪರ ವಿಸಂವಾದವೆಂಬ ಸಿದ್ಧಾಂತನ್ಯಾಯವು ಎರಡೂ ಅಧಿಕರಣಗಳಲ್ಲಿ ಸಮಾನವಾಗಿದೆ. ಇನ್ನು ಈ ಅಧಿಕರಣದಲ್ಲಿ ಕೇವಲ ದುಷ್ಟಾನುಮಾನವನ್ನು ಮಾತ್ರ ನಿರಾಕರಿಸುತ್ತೇವೆಂದು ಹೇಳಬಾರದು. ಸೂತ್ರದಲ್ಲಿ ಶಾಸ್ತ್ರಶಬ್ದವನ್ನೂ ಪ್ರಯೋಗಿಸಿದ್ದರಿಂದ ದುರಾಗಮಗಳನ್ನು ಮತ್ತು ದುಷ್ಟಾಗಮಗಳನ್ನು ಎರಡನ್ನೂ ಇಲ್ಲಿ ನಿರಾಸ ಮಾಡುತ್ತಿದ್ದಾರೆಂದು ತಿಳಿಯಬೇಕು.

## ಸ್ಮೃತ್ಯಧಿಕರಣದಿಂದ ಪುನರುಕ್ತಿ ಪರಿಹಾರ

ಪುನರುಕ್ತಿದೋಷಕ್ಕೆ ಸ್ವಲ್ಪವೂ ಅವಕಾಶವಿಲ್ಲ. ಸ್ಮೃತ್ಯಧಿಕರಣದಲ್ಲಿ ಪಾಶುಪತಸ್ಮೃತಿಯ ಆಧಾರದಿಂದ ಪೂರ್ವಪಕ್ಷ ಮಾಡಿಕೊಂಡು ಪಂಚರಾತ್ರಸ್ಮೃತಿಯ ಆಧಾರದಿಂದ ಸಿದ್ಧಾಂತ ಮಾಡಿದ್ದಾರೆ. ಈ ಶಾಸ್ತ್ರಯೋನಿತ್ವಾಧಿಕರಣದಲ್ಲಿ ಸ್ಮೃತಿ ಮತ್ತು ಅನುಮಾನಗಳ ಆಧಾರದಿಂದ ಪೂರ್ವಪಕ್ಷ ಮಾಡಿಕೊಂಡು ಶಾಸ್ತ್ರದ ಆಧಾರದಿಂದ ಸಿದ್ಧಾಂತ ಮಾಡಿದ್ದಾರೆ. ಇಷ್ಟೊಂದು ವೈಲಕ್ಷಣ್ಯವಿರುವಾಗ ಪುನರುಕ್ತಿ ಹೇಗೆ ತಾನೆ ಬರುತ್ತದೆ? ಹಾಗಾದರೆ ಇಲ್ಲಿ ಶ್ರುತಿಯಿಂದ ಸಿದ್ಧಾಂತ ಮಾಡಿದ ಮೇಲೆ ಪುನಃ ಸ್ಮೃತ್ಯಧಿಕರಣದಲ್ಲಿ ಸ್ಮೃತಿಯಿಂದ ಪೂರ್ವಪಕ್ಷ ಮಾಡಲಾಗದೆಂದು ಶಂಕಿಸಬಾರದು. ಆಪ್ತವಾಕ್ಯವು ಪರಮಪ್ರಮಾಣವೆಂದು ಎಲ್ಲರೂ ಒಪ್ಪಿದ್ದಾರೆ. ಶ್ರುತಿಯು ಅಪೌರುಷೇಯವಾದ್ದರಿಂದ ಆಪ್ತೋಕ್ತವಾಗಿಲ್ಲ. ಆದರೆ ಪಾಶುಪತಾದ್ಯಾಗಮಗಳು ಪರಮಾಪ್ತರಾದ ರುದ್ರಾದಿಗಳಿಂದ ಪ್ರಣೀತವಾದ ಕಾರಣ ಪ್ರಮಾಣವಾಗಿದೆಯೆಂದು ಸ್ಮೃತ್ಯಧಿಕರಣದಲ್ಲಿ ಪೂರ್ವಪಕ್ಷ ಮಾಡಬಹುದು.

## ಸ್ಮೃತ್ಯಧಿಕರಣದಿಂದ ಬಹುವೈಲಕ್ಷಣ್ಯವಿದೆ.

ಸ್ಮೃತ್ಯಧಿಕರಣದಿಂದ ಹೀಗೂ ವೈಲಕ್ಷಣ್ಯ ತಿಳಿಯಬಹುದು - ಶಾಸ್ತ್ರಯೋನಿತ್ವಾಧಿಕರಣದಲ್ಲಿ ಅನುಮಾನದಿಂದ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಶಂಕಿಸಿ ಅನುಮಾನಕ್ಕೆ ಅಪ್ರಾಮಾಣ್ಯ ಹೇಳುವ ಮೂಲಕ ಸಿದ್ಧಾಂತ ಮಾಡಲಾಗಿದೆ. ಸ್ಮೃತ್ಯಧಿಕರಣದಲ್ಲಿ ಶೈವಾದ್ಯಾಗಮಗಳಿಂದ ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಶಂಕಿಸಿ ಶೈವಾದ್ಯಾಗಮಗಳ ಅಪ್ರಾಮಾಣ್ಯದಿಂದ ಸಿದ್ಧಾಂತ ಮಾಡಲಾಗಿದೆ. ಅಥವಾ ಶಾಸ್ತ್ರಯೋನಿತ್ವಾಧಿಕರಣದಲ್ಲಿ ದೃಷ್ಟಫಲದಲ್ಲಿ ಪಾಶುಪತಾದಿಶಾಸ್ತ್ರಗಳಿಗೆ ಪ್ರಾಮಾಣ್ಯವು ಕೂಡುವುದರಿಂದ ಶಿವಾದಿಗಳೂ ಜಗತ್ಕಾರಣರಾಗುತ್ತಾರೆಂದು ಪೂರ್ವಪಕ್ಷ ಮಾಡಿ 'ನಾವೇದವಿನ್ಮನುತೇ' ಎಂಬ ಶ್ರುತಿಯ ಆಧಾರದಿಂದ ಪಾಶುಪತಾದಿಗಳು ಪ್ರಮಾಣಗಳಾಗಲಾರವೆಂದು ಸಿದ್ಧಾಂತ ಮಾಡಲಾಗಿದೆ. ಅಥವಾ ಜಗತ್ಕಾರಣನು ವಿಷ್ಣುವಿನಂತೆ ರುದ್ರನೂ ಆಗಲಿಯೆಂದು ಅತಿವ್ಯಾಪ್ತಿ ಮೂಲಕ ಪೂರ್ವಪಕ್ಷ ಮಾಡಿ ವಿಷ್ಣುವಿನಲ್ಲಿ ಮಾತ್ರ ಜಗತ್ಕಾರಣತ್ವ ಕೂಡಲು ಸಾಧ್ಯವೆಂದು ಈ ಅಧಿಕರಣದಲ್ಲಿ ಸಿದ್ಧಾಂತ ಮಾಡಿದ್ದಾರೆ. ಸ್ಮೃತ್ಯಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವಲಕ್ಷಣಕ್ಕೆ ಅಸಂಭವದೋಷ ಹೇಳಿ ನಿರಾಕರಿಸಿದ್ದಾರೆಂದು ತಿಳಿಯಬೇಕು. ಹೀಗೆ ಒಟ್ಟು ನಾಲ್ಕು ಬಗೆಯಲ್ಲಿ ಎರಡೂ ಅಧಿಕರಣಗಳಿಗೆ ವೈಲಕ್ಷಣ್ಯವಿದೆ.

ಸ್ಮೃತ್ಯಧಿಕರಣದಲ್ಲಿ ವಿಷ್ಣುವಿನ ಜಗತ್ಕಾರಣತ್ವಲಕ್ಷಣಕ್ಕೆ ಅಸಂಭವದೋಷವನ್ನು ಹೇಳಿದ್ದಾರೆ. ಆದರೆ ಈ ಅಧಿಕರಣದಲ್ಲಿ ಅತಿವ್ಯಾಪ್ತಿ ಹೇಳಿದ್ದಾರೆ. ಅಲ್ಲಿಯಂತೆ ಇಲ್ಲಿಯೂ ಅಸಂಭವದೋಷವನ್ನೇ ಹೇಳಬಹುದಿತ್ತು. ಆದರೆ ಶ್ರುತಿಗೆ ಸ್ವತಃಪ್ರಾಮಾಣ್ಯವಿರುವುದರಿಂದ ವಿಷ್ಣುವಿನಲ್ಲೂ ಜಗತ್ಕಾರಣತ್ವ ಬಂದೇ ಬರುತ್ತದೆ. ಮತ್ತು ಸಮನ್ವಯಾಧಿಕರಣದಲ್ಲಿ ವಿಷ್ಣುವಿನಲ್ಲಿ ಸಕಲಶಬ್ದಗಳನ್ನೂ ಸಮನ್ವಯ ಮಾಡಿದ್ದರಿಂದ, ಶ್ರುತಿ ಮತ್ತು ಆಗಮಗಳಿಗೆ ಸಮನಬಲವಿರುವುದರಿಂದ, ಪೂರ್ವಪಕ್ಷಿಯು ಶ್ರುತಿಗೆ ಪ್ರಾಮಾಣ್ಯ ಒಪ್ಪಿರುವುದರಿಂದ ದೇಶ ಅಥವಾ ಕಾಲಭೇದದಿಂದ ಇಬ್ಬರೂ ಜಗತ್ ಕಾರಣರಾಗುತ್ತಾರೆಂದು ಹೇಳಲೇ ಬೇಕು.

## ಸ್ವಪಕ್ಷಸ್ಥಾಪನೆಗೆ ಶಾಸ್ತ್ರಯೋನಿತ್ವಾಧಿಕರಣ ಪರಪಕ್ಷನಿರಾಕರಣೆಗೆ ಸ್ಮೃತ್ಯಧಿಕರಣ

ಹಿಂದಿನ ಅಧಿಕರಣದಲ್ಲಿ ಹೇಳಿದ ಬ್ರಹ್ಮನ ಲಕ್ಷಣವಿಷಯದಲ್ಲಿ ಪ್ರಮಾಣಗಳ ಪ್ರತಿಜ್ಞೆಯನ್ನು ಈ ಅಧಿಕರಣದಲ್ಲಿ ಮಾಡುತ್ತಿದ್ದಾರೆ. 'ಶಾಸ್ತ್ರಪ್ರಮಾಣಗಳ ಆಧಾರದಿಂದ ಬ್ರಹ್ಮನೇ ಜನ್ಮಾದಿಕಾರಣನಾಗಬೇಕಿಲ್ಲ, ರುದ್ರಾದಿಗಳೂ ಆಗಬಹುದೆಂಬ ಶಂಕೆ ಬಂದರೆ ಮುಂದಿನ ಅಧಿಕರಣದಲ್ಲಿ ಉಪಕ್ರಮಾದಿಗಳ ಆಧಾರದಿಂದ ಶಾಸ್ತ್ರಗಳು ಬ್ರಹ್ಮನಲ್ಲೇ ಸಮನ್ವಯವಾಗುತ್ತವೆಂದು ಸಮನ್ವಯದ ಪ್ರಸ್ತಾಪ ಮಾಡುತ್ತಾರೆ. ಅದರ ಉಪಪಾದನೆಗೋಸ್ಕರವೇ ಮುಂದಿನ ಸಮಗ್ರ ಅಧ್ಯಾಯ ಹೊರಡುತ್ತದೆ. ಹೀಗೆ ಈ ಶಾಸ್ತ್ರಯೋನಿತ್ವಾಧಿಕರಣವು ಮುಂದೆ ಹೇಳುವ ಸಮನ್ವಯದ ಪ್ರಸ್ತಾಪಕ್ಕೂ ಹಿಂದೆ ಹೇಳಿದ ಜಗತ್ಕಾರಣನಾದ ಬ್ರಹ್ಮನಲ್ಲಿ ಪ್ರಮಾಣವನ್ನು ಹೇಳಲೂ ಹೊರಟಿರುವುದರಿಂದ ಸ್ವಪಕ್ಷಸಾಧಕೋಪನ್ಯಾಸ-ಪರವಾಯಿತು.

ಆದರೆ ಸ್ಮೃತ್ಯಧಿಕರಣವು ಬಾಧಕೋದ್ಧಾರಪರವಾಗಿದೆ. ಪ್ರಥಮಾಧ್ಯಾಯದಲ್ಲಿ ಹೇಳಿದ ಸಮನ್ವಯವನ್ನು ಸಮರ್ಥಿಸುವಂತಹದ್ದು ಯುಕ್ತಿಸಮಯಾದಿಗಳ ವಿರೋಧವಿಲ್ಲದಿರುವಿಕೆ. ಆ ಯುಕ್ತ್ಯಾದಿಗಳ ವಿರೋಧವಿಲ್ಲವೆಂದು ಸಮರ್ಥಿಸುವುದಕ್ಕಾಗಿ ಸ್ಮೃತ್ಯಧಿಕರಣ ಹೊರಟಿದ್ದರಿಂದ ಬಾಧಕೋದ್ಧಾರಪರವಾಯಿತು. ಆದ್ದರಿಂದ ಶಾಸ್ತ್ರಯೋನಿತ್ವಾಧಿಕರಣಕ್ಕೆ ಸ್ಮೃತ್ಯಧಿಕರಣದಿಂದ ಗತಾರ್ಥತ್ವವು ಬರುವುದಿಲ್ಲ.

ಸ್ಮೃತ್ಯಾದ್ಯಧಿಕರಣಗಳಿಂದ ಪುನರುಕ್ತಿ ಬಾರದಿದ್ದರೂ ಶಬ್ದಮೂಲತ್ವಾಧಿಕರಣದಿಂದ ಪುನರುಕ್ತಿ ಬರುತ್ತದೆ - ಇತರವ್ಯಪದೇಶಾಧಿಕರಣದಲ್ಲಿ ಜೀವಕರ್ತೃತ್ವವನ್ನು ನಿರಾಕರಿಸಿದ ಮೇಲೆ ಪುನಃ ಸಂಶಯ ಬರುತ್ತದೆ. ಜೀವನಲ್ಲಿ

ಹೇಳಿದ ನಿರವಯವತ್ವಶಬ್ದವ್ಯಾಕೋಪಾದಿ ದೋಷಗಳೆಲ್ಲವೂ ದೇವರಲ್ಲೂ ಬರುತ್ತವೆ, ಎಂಬ ತರ್ಕದ ವಿರೋಧ ಬರುತ್ತದೆಂದರೆ ವಿಷ್ಣುವು ಶಬ್ದೈಕಸಮಧಿಗಮ್ಯನಾಗಿದ್ದಾನೆ. ಅನುಮಾನಕ್ಕೆ ಗೋಚರನೇ ಅಲ್ಲವೆಂದು 'ಶ್ರುತೇಸ್ತು ಶಬ್ದಮೂಲತ್ವಾತ್' ಎಂಬ ಸೂತ್ರದಲ್ಲಿ ತರ್ಕಕ್ಕೆ ಅಪ್ರಾಮಾಣ್ಯವನ್ನು ಹೇಳಿದ್ದಾರೆ. ಪುನಃ ನೀವು ಶಾಸ್ತ್ರಯೋನಿತ್ವಾಧಿಕರಣದಲ್ಲಿ ತರ್ಕದ ಅಪ್ರಾಮಾಣ್ಯವನ್ನು ಸಮರ್ಥಿಸಿದರೆ ಪುನರುಕ್ತಿ ಬರುತ್ತದೆ. ಶಾಸ್ತ್ರಯೋನಿತ್ವಾಧಿಕರಣದಲ್ಲಿ ದುರಾಗಮಗಳ ನಿರಾಕರಣೆಯನ್ನು ಅಧಿಕವಾಗಿ ಮಾಡಿರಬಹುದು. ಆದರೆ ಅನುಮಾನ ನಿರಾಕರಣೆಯ ಅಂಶದಲ್ಲಿ ಪುನರುಕ್ತಿ ತಪ್ಪಿದ್ದಲ್ಲ. ಮತ್ತು ಈ ಅಧಿಕರಣದಿಂದ ಶಬ್ದಮೂಲತ್ವಾಧಿಕರಣಕ್ಕೆ ಗತಾರ್ಥತ್ವವೂ ತಪ್ಪಿದ್ದಲ್ಲ.

## ಸಂಶಯ ಹಾಗು ಪೂರ್ವಪಕ್ಷ

ಜಗತ್ಕಾರಣತ್ವವು ಅನುಮಾನ ಹಾಗೂ ಪಾಶುಪತಾದ್ಯಾಗಮಗಳಿಂದ ತಿಳಿಯಲು ಯೋಗ್ಯವಾಗಿ- ರುವುದರಿಂದ ವಿಷ್ಣುವಿನಲ್ಲಿ ಬಂದಂತೆ ಬೇರೆಯವರಲ್ಲಿಯೂ ಬರುತ್ತದೆಂದು ಸಾಧಿಸುವುದು ಪೂರ್ವಪಕ್ಷದ ಗುರಿ. ಜಗತ್ಕಾರಣತ್ವವು ಅನುಮಾನ ಮತ್ತು ಆಗಮಗಳಿಗೆ ವಿಷಯವಾಗಲು ಅಯೋಗ್ಯವಾಗಿರುವುದರಿಂದ ವಿಷ್ಣುವಿನಲ್ಲಿ ಮಾತ್ರ ಬರುತ್ತದೆಂದು ಸಾಧಿಸುವುದು ಸಿದ್ಧಾಂತದ ಗುರಿ. ಹಿಂದಿನ ಅಧಿಕರಣದಲ್ಲಿ ಹೇಳಿದ ಜಗತ್ಕಾರಣತ್ವ ಲಕ್ಷಣಕ್ಕೆ ರುದ್ರಾದಿಗಳಲ್ಲಿ ಅನುಮಾನಗಳ ಆಧಾರದಿಂದ ಅತಿವ್ಯಾಪ್ತಿ ಬರುತ್ತದೆ. ಅನುಮಾನವು ಪ್ರಮಾಣವಲ್ಲವೆಂದು ಹೇಳಲು ನಿಯಾಮಕ ಪ್ರಮಾಣವಿಲ್ಲ. ಅನುಮಾನದಿಂದ ಸಾಮಾನ್ಯವಾಗಿ ಕರ್ತೃತ್ವವನ್ನು ಸಾಧಿಸಿ ಪಾಶುಪತಾದ್ಯಾಗಮಗಳ ಸಹಕಾರದಿಂದ ರುದ್ರನಲ್ಲಿ ಪರ್ಯವಸಾನ ಮಾಡುತ್ತೇವೆ. ಪಾಶುಪತಾದ್ಯಾಗಮವು ಅನುಮಾನಕ್ಕೆ ವಿರೋಧಿಯಲ್ಲದ ಕಾರಣ ಸುಲಭವಾಗಿ ಜಗತ್ಕಾರಣತ್ವಲಕ್ಷಣವು ರುದ್ರನಲ್ಲಿ ಬರುತ್ತದೆ. ಆದ್ದರಿಂದ 'ಶಿವಃ ಜಗಜ್ಜನ್ಮಾದಿಕರ್ತಾ ಸರ್ವಜ್ಞತ್ವಾತ್' ಎಂಬ ಅನುಮಾನವು ರುದ್ರನಲ್ಲಿ ಸರ್ವಜ್ಞತ್ವಹೇತುವಿನಿಂದ ಜಗಜ್ಜನ್ಮಾದಿಕರ್ತೃತ್ವವನ್ನು ಸಾಧಿಸುತ್ತದೆಂಬುದು ಈ ಅಧಿಕರಣದ ಪೂರ್ವಪಕ್ಷ.

## ಆಗಮಸಹಾಯವಿಲ್ಲದ ಅನುಮಾನಗಳಿಂದ ಜಗತ್‌ಕಾರಣತ್ವಲಕ್ಷಣಕ್ಕೆ ರುದ್ರಾದಿಗಳಲ್ಲಿ ಅತಿವ್ಯಾಪ್ತಿ.

ಶಾಸ್ತ್ರಗಳಿಂದ ವಿಷ್ಣು ಜಗತ್ಕಾರಣನೆಂದು ಸಮರ್ಥಿಸಿದರೆ ಅನುಮಾನಗಳಿಂದ ಶಿವನು ಜಗತ್ಕಾರಣನೆಂದು ಸಮರ್ಥಿಸಬಹುದು. ಪ್ರತಿಯೊಂದು ಮನುಕಲ್ಪಗಳಿಗೂ ಒಬ್ಬೊಬ್ಬ ಕರ್ತೃಗಳಿದ್ದಾರೆಂದು ನಿರ್ಣಯವಾಗಿದೆ. ಅದರಂತೆ ಪ್ರತಿಯೊಂದು ಮಹಾಕಲ್ಪಗಳಿಗೂ ಬೇರೆ ಬೇರೆ ಕರ್ತೃಗಳೇ ಇರಬೇಕು. ಮತ್ತು ಘಟವನ್ನು ನಾಶಮಾಡುವ ಶಕ್ತಿ ಕುಂಬಾರನಲ್ಲೇ ಇರಬೇಕೆಂದೇನೂ ನಿಯಮವಿಲ್ಲ. ಅದರಂತೆ ಜಗತ್ತನ್ನು ಸೃಷ್ಟಿ ಮಾಡಿದವನೇ ಜಗತ್ತನ್ನು ಸಂಹಾರ ಮಾಡಬೇಕೆಂಬ ನಿಯಮವನ್ನು ಒಪ್ಪಬೇಕಾಗಿಲ್ಲ. ಆದ್ದರಿಂದ ವಿಷ್ಣು ಜಗತ್ತನ್ನು ಸೃಷ್ಟಿಸಲಿ, ಶಿವನು ಸಂಹರಿಸಲಿ ಏನು ತಪ್ಪು?

ಮತ್ತು ವಿಚಿತ್ರವಾದ ದೊಡ್ಡ ಕೆಲಸಗಳನ್ನು ಒಬ್ಬನಿಂದಲೇ ಮಾಡಲು ಸಾಧ್ಯವಿಲ್ಲವೆಂದು ಲೋಕದಲ್ಲಿ ಕಂಡಿದೆ. ಅದರಂತೆ ಜಗತ್ತಿನ ನಿರ್ಮಾಣವೂ ಸಹ ಅನೇಕರಿಂದಲೇ ನಡೆದಿರಬೇಕು. ವಿಷ್ಣುವೊಬ್ಬನೇ ಈ ಜಗತ್ತನ್ನು ನಿರ್ಮಿಸಲಾರ. ಮತ್ತು ಕರ್ತೃತ್ವ ಶಕ್ತಿ ವಿಷ್ಣು ಒಬ್ಬನಲ್ಲೇ ಇರಬೇಕಾಗಿಲ್ಲ. ಕುಂಬಾರನಲ್ಲಿಯೂ ಘಟಕರ್ತೃತ್ವ ಶಕ್ತಿ ಇರುವುದು ಕಂಡಿದೆ. ಅದರಂತೆ ಶಿವನಲ್ಲಿಯೂ ಜಗತ್‌ಕರ್ತೃತ್ವ ಶಕ್ತಿ ಏಕೆ ಇರಬಾರದು?

ಈ ಎಲ್ಲಾ ಕಾರಣಗಳಿಂದ ವಿಷ್ಣುವಿನಂತೆ ಶಿವನೂ ಕಾರಣನಾಗಲಿ ಎಂದು ಅತಿವ್ಯಾಪ್ತಿದೋಷ ಬರುತ್ತದೆ.

ಅಷ್ಟೇ ಅಲ್ಲದೇ ರುದ್ರ, ಭವ, ಶಂಕರ ಮೊದಲಾದ ಹೆಸರುಗಳೇ ರುದ್ರನಲ್ಲಿ ಕರ್ತೃತ್ವ ಸಂಹರ್ತೃತ್ವ ಪಾಲಕತ್ವಗಳನ್ನು ಹೇಳುತ್ತಿವೆ. ಇನ್ನು ಶ್ರುತಿಸ್ಮೃತಿಗಳು ವಿಷ್ಣುವನಲ್ಲಿ ಜಗತ್‌ಕರ್ತೃತ್ವಾದಿಗಳನ್ನು ಪ್ರತಿಪಾದಿಸುತ್ತಿರಬಹುದು.

**सृष्ट्यादयश्चतस्रो जीवेष्वष्टावित्येवंरूपेणेत्यर्थः । भाष्ये 'परो दिवा' इति श्रुतौ विष्णुलिङ्गोक्तेरुपयोगाप्रतीतेराह – यदेति ।। आदावपेक्षितं शेषमाह – 'परो दिवा' इत्यादिना 'समाख्यानाच्च' इत्यन्तेन । अपेक्षितपूर्तौ भाष्यवाक्यमवतार्य योजयति – न च तत्रेति ।।**

ಸಮುದ್ರಾಂತಃಸ್ಥತ್ವಲಿಂಗವು ಅಸಿದ್ಧವಾಗಿದೆ ಎಂಬ ಶಂಕೆಯನ್ನು ಪರಿಹರಿಸಿ ನಿರವಕಾಶವಾಗಿಲ್ಲವೆಂಬ ಶಂಕೆಯನ್ನು ಪರಿಹರಿಸುತ್ತಾ 'ವಿಶ್ವಕರ್ಮ' ಎಂಬ ವಾಕ್ಯದಿಂದ ಭಾಷ್ಯವನ್ನು ವ್ಯಾಖ್ಯಾನಿಸುತ್ತಿದ್ದಾರೆ. 'ವ್ಯಸ್ತಾಃ' = ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಈ ಎಂಟನ್ನು ಜೀವಾದಿಗಳಲ್ಲಷ್ಟೇ ಹೇಳಬಹುದು. ಜಡದಲ್ಲಿ ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಈ ನಾಲ್ಕನ್ನು ಹೇಳಲಾಗದು. 'ಪರೋ ದಿವಾ' ಎಂಬ ಶ್ರುತಿಯಲ್ಲಿ ವಿಷ್ಣುಲಿಂಗವು ಹೇಳಲ್ಪಟ್ಟಿದೆ ಎಂದು ಭಾಷ್ಯದಲ್ಲಿ ಹೇಳಿದ್ದಾರೆ. ಅದಕ್ಕೆ ಪ್ರಕೃತೋಪಯೋಗವನ್ನು 'ಯದಾ' ಎಂಬ ವಾಕ್ಯದಿಂದ ಹೇಳುತ್ತಿದ್ದಾರೆ. ಭಾಷ್ಯದಲ್ಲಿ ಸೇರಿಸಿಕೊಳ್ಳಬೇಕಾದ ಶ್ರುತಿಯ ಮೊದಲ ಭಾಗವನ್ನು 'ಪರೋ ದಿವಾ' ಎಂಬ ಟೀಕೆಯಿಂದ ಹೇಳಿದ್ದಾರೆ. 'ಪರೋ ದಿವಾ' ಎಂಬುದರಿಂದ ಪ್ರಾರಂಭಿಸಿ 'ಸಮಾಖ್ಯಾನಾಚ್ಚ' ಎಂಬಲ್ಲಿಯವರೆಗೆ ಹೇಳಿದ್ದಾರೆ. ಸಂಪೂರ್ಣಶ್ರುತಿವಾಕ್ಯವು ಸಿದ್ಧವಾದ ಮೇಲೆ ಭಾಷ್ಯವಾಕ್ಯವನ್ನು ಜೋಡಿಸಿ 'ನಚ ತತ್ರ' ಎಂಬ ವಾಕ್ಯದಿಂದ ಯೋಜನೆ ಮಾಡುತ್ತಿದ್ದಾರೆ.

ಇಷ್ಟು ಸ್ಪಷ್ಟವಾಗಿ ತಿಳಿಯಬೇಕು - ಸೃಷ್ಟಿ, ಸ್ಥಿತಿ, ಲಯ, ನಿಯಮಗಳೆಂಬ ನಾಲ್ಕು ಧರ್ಮಗಳು ಜಡದಲ್ಲಿ ಸಂಕ್ಷೇಪವಾಗಿದೆ. ಜೀವರಲ್ಲಿ ವಿಸ್ತಾರವಾಗಿದೆ. ಅಂದರೆ ಸೃಷ್ಟಿ, ಸ್ಥಿತಿ, ಲಯ, ನಿಯಮಗಳ ಜೊತೆ ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳನ್ನೂ ಕೂಡ ಸೇರಿಸಿಕೊಳ್ಳಬೇಕು. ಈ ಎಂಟು ಬಗೆಯ ಧರ್ಮಗಳು ಯಾರಿಂದ ಉಂಟಾಗುತ್ತವೋ ಇದನ್ನು 'ವ್ಯಸ್ತಸಮಸ್ತವಿಶ್ವವಿಭೂತೇ' ಎಂಬ ಪದದಿಂದ ತಿಳಿಸಿದ್ದಾರೆ.

'ಪರೋ ದಿವಾ' ಎಂಬ ವಿಶ್ವಕರ್ಮ ಸೂಕ್ತಕ್ಕೆ, ಅಂಭ್ರಣೀ ಸೂಕ್ತದ ಸಂವಾದದಿಂದ ವಿಷ್ಣುವೇ ವಿಶ್ವಕರ್ಮಸೂಕ್ತ ಪ್ರತಿಪಾದ್ಯನೆಂದು ನಿರ್ಧಾರವಾಗುತ್ತದೆ. ವಿಶ್ವಕರ್ಮಸೂಕ್ತದ ಮಂತ್ರ ಹೀಗಿದೆ - 'ಪರೋ ದಿವಾ ಪರ ಏನಾ ಪೃಥಿವ್ಯಾ ಪರೋ ದೇವೇಭಿರಸುರೈರ್ಯದಸ್ತಿ' ದಿವಾ = ಶ್ರೀದೇವಿಗಿಂತ, ಪರ = ಶ್ರೇಷ್ಠನು, ಏನಾ ಪೃಥಿವ್ಯಾ = ಈ ಭೂಮಿಗಿಂತಲೂ,

ಪರಃ = ಶ್ರೇಷ್ಠನು, ದೇವೇಭಿಃ = ದೇವತೆಗಳಿಂದ, ಅಸುರೈಃ = ದಾನವರಿಂದಲೂ, ಯದಸ್ತಿ = ವಿಶ್ವದಲ್ಲಿರುವ ಸಮಸ್ತ ವಸ್ತುಗಳಿಗಿಂತಲೂ ಪರಃ ಶ್ರೇಷ್ಠನು.

### ಸಂವಾದ ಪ್ರಮಾಣದಿಂದ ವಿಶ್ವಕರ್ಮ ಸೂಕ್ತಪ್ರತಿಪಾದ್ಯ ನಾರಾಯಣನೇ

**भावदीपः** – 'इत्याह' इत्यत्र भाष्येऽपेक्षितकर्मार्पकं परो दिवेत्यादेवेति भावेनाह – **द्यावेति** ।। **लक्ष्मीरिति** ।। अस्य सूक्तस्याम्भ्रिणीवाक्यत्वात् अम्भ्रिण्याश्च 'श्रीर्भूर्दुर्गाम्भ्रिणीह्रीश्च महालक्ष्मीश्च दक्षिणा' इति बृहद्भाष्योक्तश्रुत्या लक्ष्मीमूर्तित्वादिति भावः । एवमग्रेपि । 'यं कामये' इत्यादेः कृत्यमाह – **न चेति** ।। श्रुत्यर्थमाह – **दिवेति** ।। 'श्रीभूमिपरः' इति तत्वप्रदीपे । 'बभूव' इत्युत्तमपुरुषम् । श्रुतौ 'एना' इति पृथिवीविशेषणम् अस्या इत्यर्थः । 'तं ब्रह्माणं तमृषिं तं सुमेधाम्' इति शेषस्यार्थः – **ब्रह्माणमित्यादि** ।। 'कृणोमि' इति विकरणव्यत्ययेन 'करोमि' इत्यर्थः ।

'ಇತ್ಯಾಹ' ಎಂಬ ಭಾಷ್ಯದಲ್ಲಿ ಅಪೇಕ್ಷಿತವಾದ ಕರ್ಮವು 'ಪರೋ ದಿವಾ' ಎಂಬುದೇ ಆಗಿದೆ ಎಂದು 'ದ್ಯಾವಾ' ಎಂದು ಹೇಳಿದ್ದಾರೆ. 'ಲಕ್ಷ್ಮೀಃ' ಈ ಸೂಕ್ತವು ಅಂಭ್ರಣೀಯಿಂದ ಹೇಳಲ್ಪಟ್ಟಿದೆ. 'ಶ್ರೀರ್ಭೂರ್ದುರ್ಗಾಂಭ್ರಿಣೀಹ್ರೀಶ್ಚ ಮಹಾಲಕ್ಷ್ಮೀಶ್ಚ ದಕ್ಷಿಣಾ' ಎಂಬ ಬೃಹದ್ಭಾಷ್ಯದ ಮಾತಿನಂತೆ ಲಕ್ಷ್ಮಿಯ ರೂಪವಿಶೇಷವೇ 'ಅಂಭ್ರಿಣೀ' ಎನಿಸಿದೆ. 'ಯಂ ಕಾಮಯೇ' ಎಂಬ ಪದದ ಕೃತ್ಯವನ್ನು 'ನಚ' ಎಂಬ ವಾಕ್ಯದಿಂದ ತೋರಿಸುತ್ತಿದ್ದಾರೆ. ಶ್ರುತಿಯ ಅರ್ಥವನ್ನು 'ದಿವಾ' ಎಂಬುದರಿಂದ ಹೇಳುತ್ತಾರೆ. 'ಬಭೂವ' ಎಂಬುದು ಉತ್ತಮಪುರುಷವೇ ಹೊರತು ಪ್ರಥಮಪುರುಷವಲ್ಲ. ಶ್ರುತಿಯಲ್ಲಿರುವ 'ಏನಾಂ' ಎಂಬುದು ಪೃಥಿವಿಗೆ ವಿಶೇಷಣವಾಗಿದೆ. 'ಅಸ್ಯಾಃ' ಎಂದು ಇದರ ಅರ್ಥ. 'ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್' ಎಂಬ ಶ್ರುತಿಯ ಉಳಿದ ಭಾಗದ ಅರ್ಥವನ್ನು 'ಬ್ರಹ್ಮಾಣಮ್' ಇತ್ಯಾದಿಯಾಗಿ ನಿರೂಪಿಸಿದ್ದಾರೆ. ವಿಕರಣಪ್ರತ್ಯಯದ ವ್ಯತ್ಯಾಸದಿಂದ 'ಕೃಣೋಮಿ' ಎಂಬುದನ್ನು 'ಕರೋಮಿ' ಎಂಬುದಾಗಿ ಇಟ್ಟುಕೊಳ್ಳಬೇಕು.

ವಿವರಣೆ - ಶ್ರುತ್ಯರ್ಥ - 'ಪರೋ ದಿವಾ ಪರ ಏನಾ ಪೃಥಿವ್ಯಾ'

'ಪರೋ ದೇವೇಭಿರಸುರೈರ್ಯದಸ್ತಿ'

ದಿವಾ = ಲಕ್ಷ್ಮೀದೇವಿಗಿಂತ, ಪರಃ = ಶ್ರೇಷ್ಠನು, ಏನಾ = ಈ, ಪೃಥಿವ್ಯಾ = ಭೂದೇವಿಗಿಂತ, ಪರಃ = ಶ್ರೇಷ್ಠನು, ದೇವೇಭಿಃ = ಸಕಲ ದೇವತೆಗಳಿಗಿಂತಲೂ, ಪರಃ = ಶ್ರೇಷ್ಠನು, ಅಸುರೇಭಿಃ = ಅಸುರರಿಗಿಂತಲೂ, ಪರಃ = ಶ್ರೇಷ್ಠನು, ಅಷ್ಟೇ ಅಲ್ಲದೇ ಯದಸ್ತಿ = ಬೇರೆ ಯಾವ ಪದಾರ್ಥವಿದೆಯೋ, ತಸ್ಮಾತ್‌ಸರ್ವಸ್ಮಾತ್ ಅಪಿ = ಆ ಎಲ್ಲಾ ಪದಾರ್ಥಗಳಿಗಿಂತಲೂ, ಪರಃ = ಶ್ರೇಷ್ಠನು, ಇಂತಹ ಶ್ರೇಷ್ಠನಾದ ವ್ಯಕ್ತಿಯು ಶ್ರೀದೇವಿ ಭೂದೇವಿಗಿಂತಲೂ ಶ್ರೇಷ್ಠನಾಗಿದ್ದಾನೆ.

'ಪರೋ ದಿವಾ ಪರಾ ಏನಾ ಪೃಥಿವ್ಯೈತಾವತೀ ಮಹಿನಾ ಸಂಬಭೂವ'

ಅಹಂತು = ನಾನಾದರೂ (ಲಕ್ಷ್ಮೀಯಾದರೂ) ಮಹಿನಾ = ಮಹಿಮೆಯಿಂದ, ಏತಾವತಿ = ಹಿಂದೆ ಹೇಳಿದಷ್ಟು ಪರಿಮಿತಿಯುಳ್ಳವಳು, ಬಭೂವ = ಆಗಿರುವೆನು.

'ಯಂ ಕಾಮಯೇ ತಂತಂ ಉಗ್ರಂ ಕೃಣೋಮಿ ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಂ'

ಯಂ ಯಂ = ಯಾವ ರುದ್ರಪದವಿಗೆ ಯೋಗ್ಯರಾದ ಜೀವರನ್ನು ಉಗ್ರಂ ಕರ್ತುಂ = ರುದ್ರರನ್ನಾಗಿ ಮಾಡಲು, ಯಂ = ಆಯಾ ಪದವಿಗೆ ಯೋಗ್ಯರಾದವರನ್ನು, ಬ್ರಹ್ಮಾಣಂ = ಬ್ರಹ್ಮದೇವರನ್ನಾಗಿ, ಋಷಿಂ = ಋಷಿಯನ್ನಾಗಿ, ಸುಮೇಧಾಂ = ಜ್ಞಾನಿಯನ್ನಾಗಿ, ಕರ್ತುಂ = ಮಾಡಲು, ಕಾಮಯೇತ್ = ಬಯಸುವೆನು, ತಂ ತಂ = ಆಯಾ ಜೀವರನ್ನು, ಕೃಣೋಮಿ = ರುದ್ರನನ್ನಾಗಿ, ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಬುದ್ಧಿವಂತನನ್ನಾಗಿ ಮಾಡುತ್ತೇನೆ.

'ಮಮ ಯೋನಿಃ ಅಪ್‌ಸ್ವಂತಃ ಸಮುದ್ರೇ'

ಮಮ = ನನಗೆ, ಯೋನಿಃ = ಕಾರಣನಾದ ವ್ಯಕ್ತಿಯು, ಸಮುದ್ರೇ = ಸಮುದ್ರದಲ್ಲಿ, ಅಪ್‌ಸ್ವಂತಃ = ನೀರಿನ ಒಳಗಡೆ ನೆಲೆಸಿದ್ದಾನೆ. (ಅವನೇ ನಾರಾಯಣ)

## 'ಸಮುದ್ರಶಾಯಿ' ನಾರಾಯಣನೇ

**भावदीपः – प्रसिद्धत्वादिति** ।। 'अमरकोशादौ' इति भावः । **महोदधीति**।। 'अम्भोनिधिरनन्तात्मा महोदधिशयोन्तकः' इति सहस्रनामसु । इति **स्मृतेरिति** ।। 'अन्तस्तद्धर्मे'त्यत्र वक्ष्यमाणस्मृतेरिति ज्ञेयम् । **यत्रेति** ।। 'यं कामये तंतमुग्रम्' इत्यत्रेत्यर्थः । **वक्ष्यमाणेति** ।। अन्तर्नयादौ प्रत्यधिकरणं

वक्ष्यमाणेत्यर्थः । 'वेदे रामायणे इति वक्ष्यमाणे'ति चार्थः । एतेन भाष्ये 'चः समुच्चये' इति दर्शितम् । हरिवंशत्रये इति ॥ 'खिलाखिलपारिजातरूपभागत्रये' इत्यर्थः ॥

ಪ್ರಸಿದ್ಧತ್ವಾತ್ = ಅಮರಕೋಶಾದಿಗಳಲ್ಲಿ ಪ್ರಸಿದ್ಧವಾಗಿದೆ ಎಂದರ್ಥ. 'ಮಹೋದಧಿ' 'ಅಂಭೋನಿಧಿರನಂತಾತ್ಮಾ ಮಹೋದಧಿಶಯೋಽಂತಕಃ' ಎಂಬ ವಿಷ್ಣುಸಹಸ್ರನಾಮದಲ್ಲಿ. 'ಇತಿ ಸ್ಮೃತೇಃ' ಅಂತಃಸ್ತದ್ಧರ್ಮೋಪದೇಶಾತ್ ಎಂಬಲ್ಲಿ ಹೇಳುವ ಸ್ಮೃತಿಯ ಬಲದಿಂದ. ಅತ್ರ' = ಯಂ ಕಾಮಯೇ ತಂ ತಮುಗ್ರಂ' ಎಂಬಲ್ಲಿ. 'ವಕ್ಷ್ಯಮಾಣನ್ಯಾಯೈಃ' ಅಂತರಧಿ-ಕರಣಗಳಲ್ಲಿ ಹೇಳುವ ನ್ಯಾಯದಿಂದ. ಅಥವಾ 'ವೇದೇ ರಾಮಾಯಣೇ' ಎಂದು ಮುಂದೆ ಹೇಳುವ ಪ್ರಮಾಣದಿಂದ. ಹೀಗೆ ಹೇಳಿದ್ದರಿಂದ 'ಉಕ್ತನ್ಯಾಯೇನ ಚ' ಎಂಬ ಭಾಷ್ಯದಲ್ಲಿರುವ ಚಶಬ್ದವು ಸಮುಚ್ಚಾಯಕವಾಗಿದೆ ಎಂದು ತಿಳಿಸಿದಂತಾಯಿತು. 'ಹರಿವಂಶತ್ರಯೇ ಇತಿ' -- ಖಿಲ, ಅಖಿಲ, ಪಾರಿಜಾತ ಎಂದು ಹರಿವಂಶವು ಮೂರು ಭಾಗಗಳಲ್ಲಿದೆ. ಈ ಮೂರೂ ಭಾಗಗಳಲ್ಲಿ 'ವೇದೇ ರಾಮಾಯಣೇ' ಎಂಬ ಶ್ಲೋಕವು ಪ್ರಸಕ್ತವಾಗಿದೆ ಎಂಬುದನ್ನು ತಿಳಿಸಲು ''ಹರಿವಂಶೇಷು'' ಎಂದು ಬಹುವಚನ ಪ್ರಯೋಗವನ್ನು ಮಾಡಿದ್ದಾರೆ.

## ವೈಷ್ಣವಶಾಸ್ತ್ರಗಳಿಗೆ ಶೈವಶಾಸ್ತ್ರಗಳ ವಿರೋಧವಿಲ್ಲ

**ब्रह्मसूत्रभाष्यम् – न चेतरग्रन्थविरोधः ।**

**'एष मोहं सृजाम्याशु यो जनान् मोहयिष्यति ।**
**त्वं च रुद्र महाबाहो मोहशास्त्राणि कारय ॥**
**अतथ्यानि वितथ्यानि दर्शयस्व महाभुज ।**
**प्रकाशं कुरु चात्मानमप्रकाशं च मां कुरु'इति वाराहवचनात् ॥**

**शैवे च स्कान्दे–**

**'श्वपचादपि कष्टत्वं ब्रह्मेशानादयः सुराः ।**
**तदैवाच्युत यान्त्येव यदैव त्वं पराङ्मुखः'इति ॥**

**ब्राह्मे च ब्रह्मवैवर्ते–**

**'नाहं न च शिवोऽन्ये च तच्छक्त्येकांशभागिनः ।**
**बालः क्रीडनकैर्यद्वत् क्रीडतेऽस्माभिरच्युतः' इति ॥**

**न च वैष्णवेषु तथा । तच्च 'एष मोहम्'इत्युक्तम् ॥**

**॥ इति श्रीमदानन्दतीर्थभगवत्पादाचार्यविरचिते ब्रह्मसूत्रभाष्ये जिज्ञासाधिकरणम् ॥**

ಅನುವಾದ - ಈ ವಿಚಾರದಲ್ಲಿ ಬೇರೆ ಶೈವಾದಿಗ್ರಂಥಗಳ ವಿರೋಧವಿರುವುದಿಲ್ಲ.

ಏಕೆಂದರೆ ''ಎಲೈ ರುದ್ರನೇ! ನಾನು ಭಕ್ತರಲ್ಲದ ಜನರನ್ನು ಮೋಹಿಸುವುದಕ್ಕಾಗಿ ನಟನೆ ಮಾಡುತ್ತೇನೆ. ಮೋಹಕವಾದ ಮಾತುಗಳನ್ನಾಡುತ್ತೇನೆ. ನೀನೂ ಸಹ ಅನ್ಯಥಾಜ್ಞಾನವನ್ನು ಉಂಟುಮಾಡುವ ಶಾಸ್ತ್ರಗಳನ್ನು ರಚನೆ ಮಾಡು; ಇತರ ಋಷಿಗಳಿಂದಲೂ ಅಂತಹ ಮೋಹಯುಕ್ತವಾದ ಶಾಸ್ತ್ರಗಳನ್ನು ರಚನೆ ಮಾಡಿಸು; ಸುಳ್ಳುವಿಷಯಗಳನ್ನು ಪರಸ್ಪರ ವಿರುದ್ಧವಿಷಯಗಳನ್ನು ಆ ಶಾಸ್ತ್ರಗಳಲ್ಲಿ ತೋರಿಸು. ನಿನ್ನನ್ನು ಸರ್ವೋತ್ತಮನೆಂದು ನಿರೂಪಿಸು. ನನ್ನನ್ನು ಅಸಮರ್ಥನೆಂದು ಮರೆಮಾಚು'' ಎಂದು ವರಾಹಪುರಾಣದಲ್ಲಿ ಹೇಳಲಾಗಿದೆ.

ಶೈವಪುರಾಣ ಹಾಗೂ ಸ್ಕಾಂದಪುರಾಣಗಳಲ್ಲಿ ಹೀಗೆ ಹೇಳಿದೆ-- ಎಲೈ ನಾಶವಿಲ್ಲದ ವಿಷ್ಣುವೇ! ಯಾವ ಕ್ಷಣದಲ್ಲಿ ನಿನ್ನ ಅನುಗ್ರಹ ತಪ್ಪುತ್ತದೋ ಅದೇ ಕ್ಷಣದಲ್ಲಿಯೇ ಚತುರ್ಮುಖಬ್ರಹ್ಮ, ರುದ್ರ, ಇಂದ್ರ ಮೊದಲಾದ ದೇವತೆಗಳೂ ಸಹನಾಯಿಯನ್ನು ಬೇಯಿಸಿ ತಿನ್ನುವನಿರ್ಭಾಗ್ಯಶಾಲಿಗಿಂತಲೂ ಕಷ್ಟಸ್ಥಿತಿಯನ್ನು ನಿಶ್ಚಯವಾಗಿ ಹೊಂದುತ್ತಾರೆ'. ಎಂದು.

ಬ್ರಹ್ಮಪುರಾಣದಲ್ಲಿ ಮತ್ತು ಬ್ರಹ್ಮವೈವರ್ತಪುರಾಣದಲ್ಲಿಯೂ ''ಚತುರ್ಮುಖನಾದ ನಾನು, ರುದ್ರನೂ, ಮತ್ತು ಇತರ ಯಾರೇ ದೇವತೆಗಳಾಗಲೀ ಶ್ರೀಹರಿಯ ಅನಂತಶಕ್ತಿಯಲ್ಲಿ ಒಂದು ಶಕ್ತಿಯ ಅಂಶಕ್ಕೂ ಅರ್ಹರಲ್ಲ. ಆದರೂ ಬಾಲಕನು ಆಟದ ಸಾಮಗ್ರಿಗಳಿಂದ ಹೇಗೆ ಆಟವಾಡುತ್ತಾನೋ ಅದರಂತೆ ನಾಶರಹಿತನಾದ ಪರಮಾತ್ಮನು ನಮ್ಮೆಲ್ಲರ ಜೊತೆ ಆಟವಾಡುತ್ತಾನೆ'' ಎಂದು ಹೇಳಿರುವುದರಿಂದ ವೈಷ್ಣವಶಾಸ್ತ್ರಗಳಿಗೆ ಶೈವಶಾಸ್ತ್ರಗಳಿಂದ ವಿರೋಧವಿಲ್ಲ. ವೈಷ್ಣವಶಾಸ್ತ್ರಗಳಲ್ಲಿಯೂ ಪರಸ್ಪರವಿರೋಧಕ್ಕೆ ಅವಕಾಶವಿಲ್ಲ. ಕೆಲವೆಡೆ ಅಂತಹ ಪ್ರಸಂಗವಿದ್ದರೂ ಹಿಂದೆ ಹೇಳಿದಂತೆ ಅಯೋಗ್ಯಜನರನ್ನು ಮೋಹಪಡಿಸುವುದಕ್ಕಾಗಿ ಹೇಳಿದ ಮಾತು ಎಂದು ಈ ಹಿಂದೆಯೇ ಹೇಳಿದ್ದಾಗಿದೆ.

ಇಲ್ಲಿಗೆ ಶ್ರೀಮದಾಚಾರ್ಯರು ರಚಿಸಿದ ಬ್ರಹ್ಮಸೂತ್ರಭಾಷ್ಯದಲ್ಲಿ
ಜಿಜ್ಞಾಸಾಧಿಕರಣದ ಭಾವಾರ್ಥವು ಸಮಾಪ್ತವಾಯಿತು

ಜಿಜ್ಞಾಸಾಧಿಕರಣ (೧-೧-೧)

ಪ್ರತಿಪದಾರ್ಥ -- ಆದ್ದರಿಂದ ಇತರಗ್ರಂಥವಿರೋಧಃ = ಬೇರೆ ಪಾಶುಪತಾದಿಗ್ರಂಥಗಳ ವಿರೋಧವು, ನ ಚ = ಬರುವುದಿಲ್ಲವಷ್ಟೆ.

ಏಕೆಂದರೆ, ಅಹಂ = ನಾನು, ಮೋಹಂ = ಭಕ್ತರಲ್ಲದವರಿಗೆ ಮೋಹವನ್ನು, ಸೃಜಾಮಿ = ಹುಟ್ಟಿಸುತ್ತೇನೆ. ಏಷಃ = ಈ ಅಜ್ಞಾನವು, ಜನಾನ್ = ಅಭಕ್ತಜನರನ್ನು, ಮೋಹಯಿಷ್ಯತಿ = ವಂಚನೆ ಮಾಡುತ್ತದೆ. ಹೀಗೆ ರುದ್ರದೇವರಿಗೆ ನಾರಾಯಣನು ಹೇಳಿ, ಮಹಾಭಾಗೋ = ಮಹಾಬಲಶಾಲಿಯಾದ, ರುದ್ರ = ಎಲೈ ರುದ್ರನೇ! ತ್ವಂ ಚ = ನೀನು ಸಹ, ಮೋಹಶಾಸ್ತ್ರಾಣಿ = ನಿನ್ನನ್ನು ಸರ್ವೋತ್ತಮನೆಂದು ಪ್ರತಿಪಾದಿಸುವ ವಂಚಕಶಾಸ್ತ್ರಗಳನ್ನು, ಕಾರಯ = (ರಚಿಸು) ದಧೀಚಿ ಮೊದಲಾದವರಿಂದ ರಚನೆ ಮಾಡಿಸು; (ತೇಷು = ಆ ಮೋಹಶಾಸ್ತ್ರಗಳಲ್ಲಿ) ಅತಥ್ಯಾನಿ = ಎಲ್ಲೂ ಇಲ್ಲದ ಲಿಂಗಾನ್ವೇಷಣಾದಿ ವಿಷಯಗಳನ್ನು, ವಿತಥ್ಯಾನಿ = ವಿರುದ್ಧಾರ್ಥಗಳನ್ನು, ದರ್ಶಯಸ್ವ = ತೋರಿಸು, ಆತ್ಮಾನಂ = ನಿನ್ನನ್ನು, ಪ್ರಕಾಶಂ = ಸರ್ವೋತ್ತಮನೆಂದು, ಕುರು = ಪ್ರಸಿದ್ಧಿಗೊಳಿಸು, ಮಾಂ ಚ = ನನ್ನನ್ನು, ಅಪ್ರಕಾಶಂ ಚ = ಅಸಮರ್ಥನೆಂದು, ಕುರು = ಮಾಡು, ಇತಿ = ಹೀಗೆ, ವಾರಾಹವಚನಾತ್ = ವರಾಹಪುರಾಣದಲ್ಲಿರುವ ಮಾತಿನಿಂದ ತಿಳಿಯುತ್ತದೆ. ಮತ್ತು

ಶೈವೇ = ಶೈವ ಪುರಾಣದಲ್ಲಿ, ಸ್ಕಾಂದೇ ಚ = ಸ್ಕಾಂದಪುರಾಣದಲ್ಲಿಯೂ ಹೇಳಲ್ಪಟ್ಟಿದೆ. ಹೇ ಅಚ್ಯುತ = ನಾಶರಹಿತನಾದ ಎಲೈ ವಿಷ್ಣುವೇ!, ಯದ್ವೈವ = ಯಾವ ಕ್ಷಣದಲ್ಲಿ, ತ್ವಂ = ನೀನು, ಪರಾಙ್ಮುಖಃ = ವಿಮುಖನಾಗುತ್ತೀಯೋ, ತದ್ವೈವ = ಅದೇ ಕ್ಷಣದಲ್ಲಿಯೇ, ಬ್ರಹ್ಮೇಶಾನಾದಯಃ ಸುರಾಃ = ಬ್ರಹ್ಮರುದ್ರೇಂದ್ರಾದಿದೇವತೆಗಳು, ಶ್ವಪಚಾದಪಿ = ನಾಯಿಯನ್ನು ಬೇಯಿಸುವ ನಿರ್ಭಾಗ್ಯಶಾಲಿಗಿಂತಲೂ, ಕಷ್ಟತ್ವಂ = ಅಧಿಕಕಷ್ಟವನ್ನು, ಯಾಂತ್ಯೇವ = ನಿಶ್ಚಯವಾಗಿ ಹೊಂದುತ್ತಾರೆ. ಇತಿ = ಹೀಗೆ ಹೇಳಲ್ಪಟ್ಟಿದೆ.

ಮತ್ತು ಬ್ರಾಹ್ಮೇ = ಬ್ರಹ್ಮವಿಷಯಕವಾದ ಪುರಾಣದಲ್ಲಿ, ಚ = ಮತ್ತು, ಬ್ರಹ್ಮವೈವರ್ತೇ = ಬ್ರಹ್ಮವೈವರ್ತಪುರಾಣದಲ್ಲಿಯೂ, ಅಹಂ = ಚತುರ್ಮುಖನಾದ ನಾನು, ಶಿವಃ = ರುದ್ರನು, ಅನ್ಯೇ ಚ = ಉಳಿದ ದೇವತೆಗಳು, ತತ್ = ಆ ಪರಮಾತ್ಮನ, ಶಕ್ತ್ಯೇಕಾಂಶಭಾಗಿನಃ = ಅನಂತಶಕ್ತಿಯಲ್ಲಿ ಒಂದು ಶಕ್ತಿಯ ಅಂಶಕ್ಕೂ, ನಚ = ಅರ್ಹರಾದವರಲ್ಲ. ತಥಾಪಿ = ಹಾಗಿದ್ದರೂ, ಬಾಲಃ = ಹುಡುಗನು, ಕ್ರೀಡನಕೈಃ = ಆಟದ ಸಾಮಗ್ರಿಗಳಿಂದ, ಯದ್ವತ್ = ಯಾವರೀತಿಯಾಗಿ, ಕ್ರೀಡತೇ = ಆಟವಾಡುತ್ತಾನೋ, ತದ್ವತ್ = ಅದೇ ರೀತಿಯಾಗಿ, ಅಸ್ಮಾಭಿಃ = ನಮ್ಮ ಜೊತೆಗೆ, ಅಚ್ಯುತಃ = ನಾಶರಹಿತನಾದ ನಾರಾಯಣನು, ಕ್ರೀಡತೇ = ಆಟವಾಡುತ್ತಾನೆ. ಇತಿ = ಹೀಗೆ ಹೇಳಿರುವುದರಿಂದ ಶೈವಾಗಮಗಳ ವಿರೋಧವಿಲ್ಲ.

ವೈಷ್ಣವಪುರಾಣಗಳಲ್ಲಿ ಪರಸ್ಪರವಿರೋಧಕ್ಕೆ ಅವಕಾಶವಿಲ್ಲ. ವೈಷ್ಣವೇಷು = ವಿಷ್ಣುವಿನ ಪಾರಮ್ಯವನ್ನು ಸಾಧಿಸುವ ಆಗಮಗಳಲ್ಲಿ, ತಥಾ = ಅಂತಹ ಪರಸ್ಪರವಿರೋಧವು, ನ ಚ = ಇರುವುದಿಲ್ಲ. ತಚ್ಚ = ವಿಷ್ಣುವಿನಿಂದ ಕೃಷ್ಣಾವತಾರದಲ್ಲಿ ಮಾಡಿದ ಕೈಲಾಸಾದಿಯಾತ್ರೆಗಳು, ಶಿವಸ್ತುತಿಗಳು, ಮೋಹಃ = ಮೋಹಾರ್ಥಕವಾದದ್ದು ಎಂದು, 'ಏಷ ಮೋಹಮ್' = ಏಷ ಮೋಹಂ ಎಂಬ ಸ್ಮೃತಿಯಿಂದ, ಉಕ್ತಮ್ = ಹೇಳಲ್ಪಟ್ಟಿದೆ.

ಭಾಷ್ಯದೀಪಿಕಾನುಸಾರಿಯಾದ ಪ್ರತಿಪದಾರ್ಥದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು

* * *

## ಸರ್ವೋತ್ತಮನಾದ ವಿಷ್ಣುವೇ ಜಿಜ್ಞಾಸ್ಯ

**तत्वप्रकाशिका – तथाप्यस्ति पाशुपतादिशास्त्रविरोधः । तत्र रुद्रादीनां सर्वोत्तमत्वादयुक्तेरित्यत आह – नचेति ।।**

ಆದರೂ ಸಹ ಪಾಶುಪತಾದಿಶಾಸ್ತ್ರಗಳ ವಿರೋಧವು ತಪ್ಪಿದ್ದಲ್ಲ. ಏಕೆಂದರೆ, ಪಾಶುಪತಾದಿಶಾಸ್ತ್ರಗಳಲ್ಲಿ ರುದ್ರಾದಿಗಳನ್ನೇ ಸರ್ವೋತ್ತಮರೆಂದು ಸ್ಪಷ್ಟವಾಗಿ ಹೇಳಲಾಗಿದೆ. ಈ ಪ್ರಶ್ನೆಗೆ ಆಚಾರ್ಯರು 'ನಚ' ಎಂಬುದರಿಂದ ಉತ್ತರಿಸುತ್ತಿದ್ದಾರೆ.

**तत्वप्रकाशिका – कुतो न विरोधः? इति चेत्, तेषां मोहार्थं कृतत्वादिति भावेनाह – एष इति ।। 'मुह्यतेऽनेन जनः' इति मोहः नटनं वञ्चनं वा । त्वं च सृज, दधीच्यादिभिः कारय च । अविद्यमानम् = अतथ्यम् । व्यधिकरणत्वेन विद्यमानं वितथ्यम् । आत्मानं मां च प्रति । प्रकाशं प्रसिद्धिम् ।**

ಪಾಶುಪತಾದಿಶಾಸ್ತ್ರಗಳಿಂದ ವಿರೋಧವು ಏಕಿಲ್ಲ? ಎಂದರೆ ಆ ಶಾಸ್ತ್ರಗಳನ್ನು ಕೇವಲ ಮೋಹಕ್ಕೋಸ್ಕರ ರಚಿಸಿದ್ದಾರೆಂಬ ಅಭಿಪ್ರಾಯದಿಂದ 'ಏಷಃ' ಎಂಬ ಭಾಷ್ಯವು ಹೊರಟಿದೆ. ಮೋಹಶಬ್ದಕ್ಕೆ 'ಮುಹ್ಯತೇ ಅನೇನ ಜನಃ' ಎಂಬ ವ್ಯುತ್ಪತ್ತಿಯಿಂದ ನಟನ ಅಥವಾ ವಂಚನ ಎಂದರ್ಥ. 'ಎಲೈ ರುದ್ರನೇ! ಮೋಹಶಾಸ್ತ್ರವನ್ನು ನೀನೂ ರಚಿಸು. ಮತ್ತು ದಧೀಚಿ ಮುಂತಾದವರಿಂದಲೂ ರಚನೆ ಮಾಡಿಸು'. ಅತಥ್ಯಶಬ್ದಕ್ಕೆ 'ಇಲ್ಲದಿರುವಿಕೆ' ಎಂದರ್ಥ. 'ವಿತಥ್ಯ'ಶಬ್ದಕ್ಕೆ 'ಬೇರೆ ಸ್ಥಳದಲ್ಲಿರುವಿಕೆ' ಎಂದರ್ಥ. 'ನಿನ್ನನ್ನು ಪ್ರಸಿದ್ಧಿ ಪಡಿಸಿಕೊ' 'ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' 'ಪ್ರಕಾಶ' ಶಬ್ದಕ್ಕೆ ಪ್ರಸಿದ್ಧಿ ಎಂದರ್ಥ.

**तत्वप्रकाशिका – स्कान्दादिपुराणानां शिवादिविषयत्वात् तद्विरोधः स्यात्? इत्यत आह – शैवे चेति ।। ब्राह्मे = ब्रह्मविषये । क्रीडनकैः = क्रीडासाधनैरस्माभिः करणैः । तेषां शैवादित्वेऽपि न विरोधित्वम् । तत्रापि विष्णूत्तमत्वादेरेवोक्ततया स्वविरोधेन तत्राप्रामाण्यात् ।**

'ಸ್ಕಾಂದಾದಿಪುರಾಣಗಳು ರುದ್ರಾದಿಗಳನ್ನು ಪ್ರತಿಪಾದಿಸುವುದರಿಂದ ಅವುಗಳ ವಿರೋಧ ಬರುತ್ತದೆ' ಎಂಬ ಪ್ರಶ್ನೆಗೆ 'ಶೈವೇ ಚ' ಎಂಬುದರಿಂದ ಉತ್ತರಿಸಿದ್ದಾರೆ. 'ಬ್ರಾಹ್ಮೇ' ಎಂದರೆ 'ಬ್ರಹ್ಮವಿಷಯಕವಾದ' ಎಂದರ್ಥ. 'ಕ್ರೀಡನಕೈಃ' 'ಕ್ರೀಡಾಸಾಧನಗಳಾದ ನಮ್ಮಿಂದ' ಎಂದರ್ಥ. ಸ್ಕಾಂದಾದಿಪುರಾಣಗಳಲ್ಲಿ ರುದ್ರಾದಿಗಳನ್ನು ಪ್ರತಿಪಾದಿಸಿದ್ದರೂ ಅವುಗಳ ವಿರೋಧವಿಲ್ಲ. ಅಲ್ಲಿಯೂ ಸಹ ವಿಷ್ಣುಸರ್ವೋತ್ತಮತ್ವವೇ ಹೇಳಲ್ಪಟ್ಟಿದೆ. ಆದ್ದರಿಂದ ತನ್ನ ವಾಕ್ಯಕ್ಕೆ ವಿರೋಧ ಬರುವುದರಿಂದ ಆ ಶಾಸ್ತ್ರಗಳು ಅಪ್ರಮಾಣವಾಗಬೇಕಾದೀತು.

**तत्वप्रकाशिका – न च विपरीत किं न स्यात्? इति वाच्यम् । शिवाद्युत्कर्षादेः शैवादिपुराणेष्वसाधारण्येन प्राप्तत्वादिति भावः । तथापि विष्णूत्तमत्व-रुद्राधमत्वयो वैष्णवग्रन्थविरोधोऽस्तीत्यत आह – न चेति ।। तथा = सर्वोत्तमत्वादिविरोधः ।**

**ननु तत्रापि विष्णुना रुद्रस्तुत्यादि कथमुच्यते? इत्यत आह – तच्चेति ।। यदुच्यते 'तच्चैष मोहम्' इति वचनात् मोहार्थत्वेन प्रत्युक्तमित्यर्थः । तस्माद् रुद्रादीनाम् अधमत्वे बाधकाभावात्, 'यं कामये' इत्यादौ तद्वचनाल्लक्ष्मीकारणत्वेन 'मम योनिः' इत्युक्तो विष्णुरेव । ततश्च तत्समाख्यानाद् विश्वकर्मसूक्तवाच्योऽपि स एव । तथाच । तस्यैव 'यो देवानाम्' इति सर्वनामत्वोक्तेः नान्येषां सर्वनामता,**

ಹಾಗಾದರೆ ವಿಪರೀತವಾಗಿ ಶಿವಸರ್ವೋತ್ತಮತ್ವದಲ್ಲಿ ತಾತ್ಪರ್ಯವನ್ನು ಏಕೆ ಹೇಳಬಾರದು, ಏಕೆಂದರೆ ಶೈವಾದಿಪುರಾಣಗಳಲ್ಲಿ ರುದ್ರಾದಿಗಳ ಉತ್ಕರ್ಷವನ್ನೇ ಅಸಾಧಾರಣವಾಗಿ ಪ್ರತಿಪಾದಿಸಿರುತ್ತಾರೆಂದು ಅಭಿಪ್ರಾಯ. ಆದರೂ ಸಹ ವೈಷ್ಣವಗ್ರಂಥಗಳಲ್ಲಿ ವಿಷ್ಣುಸರ್ವೋತ್ತಮತ್ವವನ್ನು ಹೇಳಿ, ರುದ್ರಾದಿಗಳ ಅಧಮತ್ವವನ್ನು ಹೇಳಿದ್ದಾರೆ. ವೈಷ್ಣವಗ್ರಂಥಗಳ ವಿರೋಧ ಶೈವಗ್ರಂಥಗಳಿಗೆ ಬರುತ್ತದಲ್ಲವೇ? ಎಂಬ ಪ್ರಶ್ನೆಗೆ 'ನಚ' ಎಂಬ ವಾಕ್ಯದಿಂದ ಉತ್ತರಿಸಿದ್ದಾರೆ. ನೀವು ಹೇಳಿದಂತೆ ವಿಷ್ಣುಸರ್ವೋತ್ತಮತ್ವಾದಿಗಳಿಂದ

ವಿರೋಧ ಬರುವುದಿಲ್ಲ. ವೈಷ್ಣವಶಾಸ್ತ್ರಗಳಲ್ಲಿಯೂ ಸಹ ವಿಷ್ಣುವಿನಿಂದ ರುದ್ರನು ಸ್ತುತನಾಗಿದ್ದಾನೆಂದು ಕಾಣಿಸುತ್ತಿದೆ. ಇದನ್ನು ಹೇಗೆ ಕೂಡಿಸುತ್ತೀರಿ? ಎಂಬ ಪ್ರಶ್ನೆಗೆ 'ತಚ್ಚ' ಎಂಬುದರಿಂದ ಉತ್ತರಿಸಿದ್ದಾರೆ. ಆದ್ದರಿಂದ ಸಕಲಶಬ್ದಗಳು ವಿಷ್ಣುವಾಚಕಗಳಾಗಿವೆ. ಇತರ ದೇವತೆಗಳನ್ನು ಪ್ರತಿಪಾದಿಸುವುದಿಲ್ಲ.

**तत्वप्रकाशिका – अतस्तेषां 'तन्नो विष्णुः' इत्यादावप्राप्तेर्विष्णुरेव परं ब्रह्म । ततो 'विष्णावेव ब्रह्म शब्दस्य मुख्यत्वेन स एव सूत्रकृता जिज्ञास्यतया विवक्षितः' इति । ''तदेवं जिज्ञास्ये 'तद् ब्रह्म' इति ब्रह्मपदश्रवणात्, तेन च तस्य पूर्णगुणत्वोक्तेः, नानुभवसिद्धाल्पगुणजीवाभेदस्तस्येति सन्दिग्धत्वेन विषयत्वसिद्धेः प्रयोजनादिसद्भावाच्च ब्रह्मजिज्ञासा कर्तव्यैव अतः शास्त्रमारम्भणीयमेव'' इति सिद्धम् ।।१।।अ-१।।**

**।। इति श्रीमज्जयतीर्थभिक्षुविरचितायां तत्वप्रकाशिकायां जिज्ञासाधिकरणम् ।।**

'ತನ್ನೋ ವಿಷ್ಣುಃ' ಇತ್ಯಾದಿ ವಾಕ್ಯಗಳಲ್ಲಿ ರುದ್ರಾದಿಗಳು ಪ್ರಾಪ್ತರಾಗದ ಕಾರಣ ವಿಷ್ಣುವೇ ಪರಬ್ರಹ್ಮನೆಂದು ನಿರ್ಣಯವಾಯಿತು. ಆದ್ದರಿಂದ ಸೂತ್ರಕಾರರು ಹೇಳಿದ ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿ ಸಮನ್ವಯವಾಗುತ್ತದೆ. ಅಂತಹ ವಿಷ್ಣುವಿನ ಜಿಜ್ಞಾಸೆಯೇ ಸೂತ್ರಕಾರರಿಗೆ ವಿವಕ್ಷಿತವಾಗಿದೆ. 'ತದೇವಂ ಜಿಜ್ಞಾಸ್ಯೇ' 'ತದ್ಬ್ರಹ್ಮ' ಹೀಗೆ ಜಿಜ್ಞಾಸ್ಯನಾದ ವಿಷ್ಣುವಿನಲ್ಲಿ 'ತದ್ ಬ್ರಹ್ಮ' ಎಂಬ ಶ್ರುತಿಯಿಂದ ಬ್ರಹ್ಮಪದವು ಕೇಳಿಸುತ್ತಿದೆ. ಆದ್ದರಿಂದ ಜಿಜ್ಞಾಸ್ಯನು ಗುಣಪೂರ್ಣನಾಗಿದ್ದಾನೆಂಬ ಅರ್ಥವು ತಿಳಿಯುತ್ತದೆ. ಅನುಭವಸಿದ್ಧನಾದ ಜೀವನು ಅಲ್ಪಗುಣನೆಂದು ತಿಳಿಯಲ್ಪಡುತ್ತಿದ್ದಾನೆ. ಈ ಅಲ್ಪಗುಣನಾದ ಜೀವನಿಗೂ ಗುಣಪೂರ್ಣನಾದ ವಿಷ್ಣುವಿಗೂ ಅಭೇದವನ್ನು ಹೇಳಲು ಸಾಧ್ಯವೇ ಇಲ್ಲ. ಆದ್ದರಿಂದ ಗುಣಪೂರ್ಣನಾದ ವಿಷ್ಣುವು ಸಂದಿಗ್ಧನಾದ್ದರಿಂದ ವಿಷಯನಾಗಿದ್ದಾನೆ. ಆದ್ದರಿಂದಲೇ ಈ ಶಾಸ್ತ್ರಕ್ಕೆ ಪ್ರಯೋಜನ ಅಧಿಕಾರಿ ಸಂಬಂಧಗಳು ಸಹ ಇರುತ್ತವೆ. ಆದ್ದರಿಂದ ಬ್ರಹ್ಮಜಿಜ್ಞಾಸೆಯನ್ನು ಅವಶ್ಯ ಮಾಡಲೇಬೇಕು. ಆದಕ್ಕೋಸ್ಕರ ಈ ಶಾಸ್ತ್ರದ ಆರಂಭವು ಆಗಲೇಬೇಕು.

ಶ್ರೀಜಯತೀರ್ಥಭಿಕ್ಷುಗಳಿಂದ ವಿರಚಿತವಾದ
ತತ್ವಪ್ರಕಾಶಿಕೆಯ ಅನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತಿಯಾಯಿತು.
ಜಿಜ್ಞಾಸಾಧಿಕರಣ (೧-೧-೧)

## ರುದ್ರಾದಿಗಳು ವಿವಕ್ಷಿತರಲ್ಲ

**भावदीपः** – 'न चाविरोधः' इति पूर्वभाष्ये श्रुतिपुराणादिविरोधस्य प्रसिद्धरुद्रार्थत्याजनेन निरस्तत्वात् 'न चेतर' इति किमर्थम्? इत्यत आह – **तथापीति** ।।

''ತನ್ನೋ ವಿಷ್ಣುಃ ಪ್ರಚೋದಯಾತ್'' ಎಂಬಲ್ಲಿರುವ ತತ್ ಪದದಿಂದ ರುದ್ರಾದಿಗಳನ್ನು ಇಟ್ಟುಕೊಳ್ಳಬಾರದು. ಮತ್ತು ಹಿಂದೆ ಪ್ರಸಕ್ತವಾದ ರುದ್ರಾದಿಶಬ್ದಗಳು ವಿಷ್ಣುವನ್ನೇ ಪ್ರತಿಪಾದಿಸುತ್ತವೆ. ಒಂದು ವೇಳೆ ಪ್ರಸಿದ್ಧರಾದ ರುದ್ರಾದ್ಯರ್ಥಗಳನ್ನೇ ಸ್ವೀಕರಿಸಿದರೆ ಶ್ರುತಿಪುರಾಣಾದಿಗಳ ವಿರೋಧವು ಬರುತ್ತದೆಂದು 'ನಚಾವಿರೋಧೇ' ಎಂಬ ಹಿಂದಿನ ಭಾಷ್ಯದಿಂದ ನಿರಾಕರಿಸಿದರು. ಹಾಗಾದರೆ 'ನಚ ಇತರಗ್ರಂಥವಿರೋಧಃ' ಎಂಬ ಭಾಷ್ಯವು ಪುನಃ ಅದೇ ವಿಚಾರವನ್ನು ಪ್ರತಿಪಾದಿಸುತ್ತದಲ್ಲವೇ? ಎಂಬ ಪ್ರಶ್ನೆಗೆ 'ತಥಾಪಿ' ಎಂಬ ಟೀಕಾಪಂಕ್ತಿಯಿಂದ ಉತ್ತರಿಸುತ್ತಿದ್ದಾರೆ.

**भावदीपः** – अत्र 'उग्र'पदेन रुद्रग्रहणे इत्यनुषङ्गः । भाष्ये एषोहमित्यर्थः। **नटनमिति** ।। विद्यमानाकाराच्छादनेनाविद्यमानाकारप्रदर्शनं **नटनम्** । **वञ्चनं** तु अविद्यमानकथनम् । 'सृजामि' इत्यस्य विपरिणामेनान्वयमाह – **सृजेति** ।। गीताभाष्यटीकायां तु कारयेति स्वार्थे णिजित्युक्तं द्वितीये ।

ಈ ವಾಕ್ಯದಲ್ಲಿ 'ಉಗ್ರಪದೇನ ರುದ್ರಗ್ರಹಣೇ' (ಉಗ್ರಪದದಿಂದ ರುದ್ರನನ್ನು ಸ್ವೀಕರಿಸಿದರೆ) ಎಂಬುದನ್ನು ಅಧ್ಯಾಹಾರ ಮಾಡಬೇಕು. ಭಾಷ್ಯದಲ್ಲಿರುವ 'ಏಷಃ' ಎಂಬ ಶಬ್ದಕ್ಕೆ 'ಅಹಮ್' ಎಂದರ್ಥ. 'ನಟನಮ್' = ಇರುವ ಆಕಾರವನ್ನು ಮುಚ್ಚಿ ಇಲ್ಲದಿರುವ ಸ್ವರೂಪವನ್ನು ತೋರಿಸಿಕೊಳ್ಳುವಿಕೆ. ವಂಚನಮ್ = ಇಲ್ಲದ್ದನ್ನು ಹೇಳುವಿಕೆ. 'ಸೃಜಾಮಿ' ಎಂಬ ಕ್ರಿಯಾಪದವನ್ನು ವಿಪರಿಣಾಮ ಮಾಡಿ 'ಸೃಜ' ಎಂದಿದ್ದಾರೆ. ಗೀತಾಭಾಷ್ಯ ಟೀಕೆಯಲ್ಲಿ 'ಸ್ವಾರ್ಥೇ ಣಿಚ್ ಪ್ರತ್ಯಯ' ವನ್ನು ಹೇಳಿ 'ಕಾರಯ'ಶಬ್ದಕ್ಕೆ 'ಮಾಡು' ಎಂಬರ್ಥವನ್ನು ಹೇಳಿದ್ದಾರೆ.

## ರುದ್ರ ಸರ್ವೋತ್ತಮತ್ವ ಕೇವಲ ಅಸುರ ಮೋಹಕ್ಕಾಗಿ

**भावदीपः – 'काप्यविद्यमानं लिङ्गमूलान्वेषणादिकमतथ्यम्' इति तत्वप्रदीपे । विष्ण्वादौ विद्यमानं रुद्रादिनिष्ठतयोच्यमानं स्वातन्त्र्यादिकं वितथ्यम् । आत्मानं मां चेति ।। कर्मप्रवचनीययुक्ते द्वितीया । 'आत्मानं प्रति प्रकाशं प्रसिद्धिं कुरु । मां च प्रति अप्रकाशम् अप्रसिद्धिं कुरु । आत्मप्रसिद्धिं ममाऽप्रसिद्धिं च कुरु' इत्यर्थः । भाष्ये इति वाराहवचनात् मोहार्थं कृतत्वावगमात् नेतरग्रन्थविरोधश्च इत्यन्वयः । 'शैवे च' इत्यादेः सङ्गत्य प्रतीतेराह – स्कान्देति ।। 'शिवादि' इत्यादिपदेन ब्रह्मादिः ।**

ತತ್ವಪ್ರದೀಪದಲ್ಲಿ 'ಅತಥ್ಯ'ಶಬ್ದಕ್ಕೆ ಎಲ್ಲಿಯೂ ಇಲ್ಲದ ಲಿಂಗಮೂಲದ ಅನ್ವೇಷಣಾದಿಗಳೆಂಬ ಅರ್ಥವನ್ನು ಹೇಳಿದ್ದಾರೆ. 'ವಿತಥ್ಯ'ಶಬ್ದಕ್ಕೆ ವಿಷ್ಣುವಿನಲ್ಲಿರುವ ಸ್ವಾತಂತ್ರ್ಯಾದಿಗಳನ್ನು ರುದ್ರಾದಿಗಳಲ್ಲಿ ಹೇಳುವಿಕೆ ಎಂದರ್ಥ. 'ಆತ್ಮಾನಂ ಮಾಂ ಚ' ಎಂಬಲ್ಲಿ 'ಕರ್ಮಪ್ರವಚನೀಯಯುಕ್ತೇ ದ್ವಿತೀಯಾ' ಎಂಬ ಸೂತ್ರದಿಂದ ದ್ವಿತೀಯಾವಿಭಕ್ತಿ ಬಂದಿದೆ. 'ಆತ್ಮಾನಂ ಪ್ರತಿ ಪ್ರಕಾಶಂ ಪ್ರಸಿದ್ಧಿಂ ಕುರು' (ನಿನ್ನನ್ನು ಪ್ರಸಿದ್ಧಿ ಮಾಡಿಕೋ) 'ಮಾಂ ಚ ಪ್ರತಿ ಅಪ್ರಸಿದ್ಧಿಂ ಕುರು' (ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' ಎಂದರ್ಥ.) ಭಾಷ್ಯದಲ್ಲಿ 'ಇತಿ ವಾರಾಹವಚನಾತ್' ಎಂಬ ಪದಕ್ಕೆ 'ನ ಚೇತರಗ್ರಂಥವಿರೋಧಶ್ಚ' ಎಂಬಲ್ಲಿ ಅನ್ವಯ. ಅಂದರೆ, ಪಾಶುಪತಾದಿಶಾಸ್ತ್ರಗಳು ಮೋಹಕ್ಕಾಗಿ ಹೊರಟಿರುವುದರಿಂದ ಅವುಗಳ ವಿರೋಧವಿಲ್ಲವೆಂದು ತಿಳಿಯಬೇಕು. 'ಶೈವೇ ಚ' ಎಂಬ ಮುಂದಿನ ಭಾಷ್ಯಕ್ಕೆ ಸಂಗತಿಯು ಸ್ಪಷ್ಟವಾಗಿ ತಿಳಿಯದ ಕಾರಣ ''ಸ್ಕಾಂದೇ'' ಇತ್ಯಾದಿ ಟೀಕಾಪಂಕ್ತಿಯು ಹೊರಟಿದೆ. ''ಶಿವಾದಿ'' ಎಂಬಲ್ಲಿರುವ ಆದಿಪದದಿಂದ ಚತುರ್ಮುಖಾದಿಗಳನ್ನು ಇಟ್ಟುಕೊಳ್ಳಬೇಕು.

**भावदीपः – तद्विरोध इति ।। अत्र 'उग्र'पदेन रुद्रग्रहणे इति इहाप्यनुषङ्गः। ब्रह्मपुराणभ्रान्तिनिरासायाह – ब्राह्म इति ।। तेनाहमिति ब्रह्मोक्तिरितिदर्शितम् ।**

'ತದ್ವಿರೋಧಃ' = ಉಗ್ರಪದೇನ ರುದ್ರ-ಗ್ರಹಣೇ (ಉಗ್ರಪದದಿಂದ ರುದ್ರನನ್ನು ಸ್ವೀಕರಿಸಿದರೆ) ಎಂಬುದನ್ನು ಅಧ್ಯಾಹಾರ ಮಾಡಬೇಕು. 'ಬ್ರಾಹ್ಮ' - ಶಬ್ದಕ್ಕೆ ಬ್ರಹ್ಮಪುರಾಣ

ಎಂಬ ಭ್ರಾಂತಿಯನ್ನು ನಿರಾಸಮಾಡುವುದಕ್ಕಾಗಿ 'ಬ್ರಾಹ್ಮ' ಎಂಬ ಟೀಕೆಯು ಹೊರಟಿದೆ. ಆದ್ದರಿಂದ ಅಹಂ ಎಂಬುದು ಬ್ರಹ್ಮನ ಮಾತು ಎಂದು ತಿಳಿಸಿದಂತಾಯಿತು.

## ಶಿವಪಾರಮ್ಯದಲ್ಲಿ ಪ್ರಾಮಾಣ್ಯವಿಲ್ಲ

**भावदीपः** – एतेन 'शैवे' इत्यपि व्याख्यातम् । चोद्यनिरासप्रकारमाह – **तेषामिति** ।। तत्र शिवाद्युत्कर्षादावप्रामाण्यादिति भावः । तथेति व्याख्येयानुवादः – **वचनादिति** ।। भाष्ये वचनादित्यस्यानुवृत्तिः । **'उक्तम्'** इत्यस्य 'प्रत्युक्तम्' इत्यर्थः । मोहार्थत्वेनेति शेष इति दर्शितम् ।

ಆದ್ದರಿಂದಲೇ ಶೈವೇ ಎಂಬ ಹಿಂದಿನ ಭಾಷ್ಯದ ಮಾತನ್ನು ವ್ಯಾಖ್ಯಾನಿಸಿದಂತಾಯಿತು. ಶಂಕೆಯ ನಿರಾಸದ ಪ್ರಕಾರವನ್ನು 'ತೇಷಾಮ್' ಎಂಬ ಟೀಕೆಯು ವಿವರಿಸುತ್ತಿದೆ. ಪಾಶುಪತಾದಿಗಳಿಗೆ ಶಿವಾದಿಗಳ ಉತ್ಕರ್ಷದಲ್ಲಿ ಪ್ರಾಮಾಣ್ಯವಿಲ್ಲವೆಂದು ಅಭಿಪ್ರಾಯ. 'ತಥಾ'' ಎಂಬುದು ಭಾಷ್ಯದ ಮಾತು. 'ವಚನಾತ್' ಎಂಬ ಪದದ ನಂತರ 'ಭಾಷ್ಯೇ' ಎಂಬುದನ್ನು ಅಧ್ಯಾಹಾರ ಮಾಡಬೇಕು. 'ಉಕ್ತಂ' ಎಂದರೆ ಪ್ರತ್ಯುಕ್ತಮ್ ಎಂದರ್ಥ. 'ಮೋಹಾರ್ಥತ್ವೇನ' ಎಂಬುದನ್ನು ಅಧ್ಯಾಹಾರ ಮಾಡಬೇಕು.

## 'ವಿಶ್ವಾಧಿಕೋ ರುದ್ರಃ' ಎಂಬದೂ ಕೂಡ ವಿಷ್ಣುಪರ

**भावदीपः** – ननु सूत्रं व्याचक्षाणस्य किं प्रसक्तानुप्रसक्तानुपयुक्तोक्त्या? इत्यतः सर्वस्य प्रकृतोपयोगमाह – **तस्मादिति** ।। पुराणादौ शिवाद्युत्कर्षोक्तेर्मोहार्थत्वात् 'विश्वाधिकः' इत्यादिश्रुतेर्विष्णुपरत्वादित्यर्थः। अयं च हेतुर्बाधकाभावे बोध्यः ।

ಸೂತ್ರವನ್ನಷ್ಟೇ ವ್ಯಾಖ್ಯಾನಿಸಬೇಕು. ಅಪ್ರಸಕ್ತವಾದದ್ದನ್ನೆಲ್ಲ ಹೇಳುತ್ತಿರುವುದು ತಪ್ಪಲ್ಲವೇ? ಎಂಬ ಪ್ರಶ್ನೆಗೆ 'ತಸ್ಮಾತ್' ಎಂಬ ಟೀಕೆಯಿಂದ ಉತ್ತರಿಸಿದ್ದಾರೆ. ಪುರಾಣಾದಿಗಳಲ್ಲಿ ಶಿವಾದಿಗಳ ಉತ್ಕರ್ಷೆಯನ್ನು ಕೇವಲ ಮೋಹಕ್ಕೋಸ್ಕರ ಹೇಳಿರುತ್ತಾರೆ. ಆದ್ದರಿಂದ 'ವಿಶ್ವಾಧಿಕೋ ರುದ್ರಃ' ಎಂಬ ಶ್ರುತಿಯು ವಿಷ್ಣುಪರವೇ ಆಗಿದೆ. ಬಾಧಕವಿಲ್ಲದಿದ್ದಾಗ ಮಾತ್ರ ಈ ಅರ್ಥವನ್ನು ತಿಳಿಯಬೇಕು.

## ಅಧಿಕರಣದ ಉಪಸಂಹಾರ

**भावदीपः –** तथाहीत्यादिनोक्तं सिद्धान्तप्रमेयमुन्मूलमिति भ्रमनिरासाय 'तद् विजिज्ञासस्व तद् ब्रह्म' इति ब्रह्मशब्देन पूर्णगुणत्वोक्तेर्नानुभव सिद्धाल्पगुणजीवाभेद इति न्यायविवरणारूढं दर्शयन् अधिकरणार्थं प्रयोजनोक्त्या उपसंहरति – **तदेवमिति** ।।

'ತಥಾಹಿ' ಎಂಬುದರಿಂದ ಪ್ರಾರಂಭಿಸಿ ಇಲ್ಲಿಯ ತನಕ ನಿರೂಪಿಸಿದ ಸಿದ್ಧಾಂತಪ್ರಮೇಯವು ಮೂಲದಲ್ಲಿ ಹೇಳಿಲ್ಲವೆಂಬ ಭ್ರಾಂತಿಯನ್ನು ಪರಿಹರಿಸಲು 'ತದೇವಮ್' ಇತ್ಯಾದಿ ಟೀಕೆಯು ಹೊರಟಿದೆ. 'ತದ್ವಿಜಿಜ್ಞಾಸಸ್ವ' 'ತದ್ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತಿದೆ. ಅನುಭವದಿಂದ ಜೀವನು ಅಲ್ಪಗುಣನೆಂದು ಸಿದ್ಧನಾಗಿದ್ದಾನೆ. ಈ ಜೀವೇಶ್ವರರಿಗೆ ಅಭೇದವು ಕೂಡುವುದಿಲ್ಲ ಎಂಬ ನ್ಯಾಯವಿವರಣೆಯಲ್ಲಿ ಹೇಳಿದ್ದನ್ನೇ ನಾವು ಇಲ್ಲಿಯತನಕ ನಿರೂಪಿಸಿದ್ದೇವೆ ಎಂದು ತೋರಿಸುತ್ತಾ ಅಧಿಕರಣದ ತಾತ್ಪರ್ಯವನ್ನು ಮತ್ತು ಪ್ರಯೋಜನವನ್ನು ಹೇಳುತ್ತಾ ಉಪಸಂಹಾರ ಮಾಡುತ್ತಿದ್ದಾರೆ.

## ಗುಣಪೂರ್ಣನಾದ ಮಹಾವಿಷ್ಣುವೇ ಜಿಜ್ಞಾಸ್ಯನು

**भावदीपः –** तच्छब्दार्थं व्यनक्ति – **ब्रह्मपदश्रवणादिति** ।। एवम् 'अथ कस्मादुच्यते' इति श्रुत्युक्तप्रकारेण पूर्णत्वोक्तेरित्यन्वयः । एतेन न्यायविवरणे ब्रह्मशब्देनेत्यत्र जिज्ञास्ये श्रुतेनेति, 'पूर्णगुणत्वोक्तेः' इत्यत्र तस्येत्यपि योज्यमिति दर्शितम् ।

ತತ್ ಶಬ್ದದ ಅರ್ಥವನ್ನು ಬ್ರಹ್ಮಪದಶ್ರವಣಾತ್ ಎಂಬುದರಿಂದ ನಿರೂಪಿಸಿದ್ದಾರೆ. ಇದರಂತೆ 'ಅಥ ಕಸ್ಮಾದುಚ್ಯತೇ ಇತಿ ಶ್ರುತ್ಯುಕ್ತಪ್ರಕಾರೇಣ ಪೂರ್ಣತ್ವೋಕ್ತೇಃ' ಎಂದು ಅನ್ವಯ. ಆದ್ದರಿಂದ ನ್ಯಾಯವಿವರಣದಲ್ಲಿ 'ಬ್ರಹ್ಮಶಬ್ದೇನ' ಎಂಬಲ್ಲಿ ಮತ್ತು 'ಜಿಜ್ಞಾಸ್ಯೇ ಶ್ರುತೇನೇತಿ ಪೂರ್ಣಗುಣತ್ವೇನ' ಎಂಬಲ್ಲಿ 'ತಸ್ಯ' ಎಂಬ ಪದವನ್ನು ಯೋಜನ ಮಾಡಿಕೊಳ್ಳಬೇಕೆಂದು ತಿಳಿಯಬೇಕು.

ತತ್ವಪ್ರಕಾಶಿಕೆಯನ್ನು ವ್ಯಾಖ್ಯಾನಿಸಲು ಶ್ರೀವ್ಯಾಸತೀರ್ಥರೇ ಸಮರ್ಥರು

**भावदीपः – सन्दिग्धत्वेनेति** ।। ब्रह्मशब्दादिना आपातप्रतीतस्य सगुण निर्गुणाल्पगुणत्वादिना विप्रतिपत्त्या सन्दिग्धत्वेनेत्यर्थः । **जिज्ञासा** श्रवणादिरूपा । **शास्त्रं** = न्यायग्रथनात्मकम् ।

टीकातात्पर्यविवृतौ व्यासतीर्थादयः क्षमाः ।
वयं तु तत्कृतव्याख्यालेशभा(जो)वं वदामहे ।।

**।। इति श्रीमद्राघवेन्द्रतीर्थविरचिततत्वप्रकाशिकाभावदीपे जिज्ञासाधिकरणम् ।।**

'ಸಂದಿಗ್ಧತ್ವೇನ' ಎಂಬುದಕ್ಕೆ ''ಬ್ರಹ್ಮಶಬ್ದದಿಂದ ಆಪಾತತಃ ಸಗುಣನೋ, ನಿರ್ಗುಣನೋ ಅಲ್ಪಗುಣನೋ ಇತ್ಯಾದಿಯಾಗಿ ವಿಪ್ರತಿಪತ್ತಿಗಳು ಇರುವುದರಿಂದ ಸಂದಿಗ್ಧವಾಗಿದೆ'' ಎಂದರ್ಥ. 'ಜಿಜ್ಞಾಸಾ' ಎಂದರೆ ಶ್ರವಣಾದಿರೂಪವಾದ ಜಿಜ್ಞಾಸೆ' ಎಂದರ್ಥ. ನ್ಯಾಯಗ್ರಥನಾತ್ಮಕವಾದದ್ದು ಶಾಸ್ತ್ರವೆನಿಸಿದೆ.

ಟೀಕಾತಾತ್ಪರ್ಯವಿವೃತೌ ವ್ಯಾಸತೀರ್ಥಾದಯಃ ಕ್ಷಮಾಃ।
ವಯಂ ತು ತತ್ಕೃತವ್ಯಾಖ್ಯಾಲೇಶಭಾ(ಜೋ)ವಂ ವದಾಮಹೇ ॥

ಟೀಕೆಯು ಅತ್ಯಂತಗಂಭೀರ. ಇದರ ತಾತ್ಪರ್ಯವನ್ನು ವಿವರಿಸಲು ಜ್ಞಾನಿಗಳಾದ ವ್ಯಾಸತೀರ್ಥಾದಿಗಳೇ ಸಮರ್ಥರು. ನಾವು ಸಮರ್ಥರಲ್ಲ. ಆದರೂ ವ್ಯಾಸತೀರ್ಥಾದಿಗಳ ವ್ಯಾಖ್ಯಾನದ ತುಣುಕಿನ ಅಭಿಪ್ರಾಯವನ್ನಷ್ಟೇ ಇಲ್ಲಿ ನಿರೂಪಿಸಿದ್ದೇವೆ.

ಶ್ರೀರಾಘವೇಂದ್ರತೀರ್ಥರಿಂದ ವಿರಚಿತವಾದ ತತ್ವಪ್ರಕಾಶಿಕಾವ್ಯಾಖ್ಯಾನವೆಂಬ ಭಾವದೀಪಟಿಪ್ಪಣಿಯ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

## ಜಿಜ್ಞಾಸಾಧಿಕರಣದ ಸಮಾಪ್ತಿ

ವಿವರಣೆ - 'ವಿರೋಧ' ಎಂಬ ಪದದ ನಂತರ 'ಅತ್ರ ರುದ್ರಗ್ರಹಣೇ' ಎಂಬ ಪದವನ್ನು ಅನುವೃತ್ತಿ ಮಾಡಬೇಕು. ಆವಾಗ ಶ್ರುತಿಯಲ್ಲಿ ರುದ್ರನನ್ನು ಸ್ವೀಕರಿಸಿದರೆ ಪಾಶುಪತಾದಿಶಾಸ್ತ್ರಗಳ ವಿರೋಧ ಬರುತ್ತದೆ ಎಂದು ಅರ್ಥವಾಗುತ್ತದೆ. ಭಾಷ್ಯದಲ್ಲಿರುವ

'ಏಷಃ' ಎಂಬ ಪದಕ್ಕೆ 'ಏನಮ್' ಎಂದರ್ಥ. 'ಮೋಹ' ಶಬ್ದಕ್ಕೆ ಮಿಥ್ಯಾಜ್ಞಾನವೆಂದರ್ಥ; ಹೊರತು ಮೋಹಕ ಎಂಬರ್ಥ ತಿಳಿಯುವುದಿಲ್ಲ. ಅದಕ್ಕೋಸ್ಕರ 'ಮುಹ್ಯತೇ' ಎಂಬ ವಾಕ್ಯವು ಹೊರಟಿದೆ. 'ನಟನಂ ವಂಚನಂ ವಾ' ಇರುವಂತಹ ಆಕಾರವನ್ನು ಮುಚ್ಚಿ ಇಲ್ಲದ ಆಕಾರವನ್ನು ತೋರಿಸುವಿಕೆಯೇ ನಟನ ಎನ್ನಿಸುತ್ತದೆ. ಇಲ್ಲದ್ದನ್ನು ಹೇಳುವಿಕೆಯು ವಂಚನೆ ಎನ್ನಿಸುತ್ತದೆ. ಹೀಗೆ ಎರಡರಲ್ಲಿರುವ ಕ್ರಿಯೆಯ ವೈಲಕ್ಷಣ್ಯವನ್ನು ತಿಳಿಯಬೇಕು. ದಧೀಚ್ಯಾದಿ ಋಷಿಗಳಿಂದ ಎಲ್ಲಿಯೂ ಇಲ್ಲದ ಲಿಂಗಮೂಲಾನ್ವೇಷಣದ ಹೇಳುವಿಕೆಯು 'ಅತಥ್ಯ' ಎನ್ನಿಸುತ್ತದೆ. ''ವಿಷ್ಣುವಿನಲ್ಲಿರುವ ಸ್ವಾತಂತ್ರ್ಯಾದಿಗಳನ್ನು ರುದ್ರಾದಿಗಳಲ್ಲಿ ಹೇಳುವಿಕೆ''ಯು ವಿತಥ್ಯ ಎನ್ನಿಸುತ್ತದೆ.

'ಆತ್ಮಾನಂ ಮಾಂ' ಎಂಬಲ್ಲಿರುವ ಎರಡೂ ಪದಗಳಿಗೆ ಕರ್ಮಾರ್ಥದಲ್ಲಿ ದ್ವಿತೀಯಾವಿಭಕ್ತಿಯನ್ನು ಹೇಳಿದರೆ 'ಪ್ರಕಾಶವಂತಂ' ಎಂದಾಗಬೇಕು. 'ಪ್ರಕಾಶಂ' ಎಂದು ಹೇಳಿದ್ದು ತಪ್ಪಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಆತ್ಮಾನಂ ಮಾಂ ಚ ಪ್ರತಿ' ಎಂದು ಉತ್ತರಿಸಿದ್ದಾರೆ. 'ಅಭಿತಃ ಪರಿತಃ ಸಮಯಾನಿಕಷಾ ಹ ಪ್ರತಿಯೋಗೇಷು' ಎಂಬ ಸೂತ್ರದಂತೆ ಕರ್ಮಪ್ರವಚನೀಯಸಂಜ್ಞೆಯಿರುವ ಶಬ್ದಕ್ಕೆ ದ್ವಿತೀಯಾವಿಭಕ್ತಿಯೇ ಬರುತ್ತದೆ.

ಪ್ರಕಾಶಶಬ್ದಕ್ಕೆ ಪ್ರಸಿದ್ಧಿಯೆಂದು ಅರ್ಥೈಸಿದ್ದರಿಂದ ಅಪ್ರಕಾಶಶಬ್ದಕ್ಕೆ ಅಪ್ರಸಿದ್ಧಿ ಎಂದು ವ್ಯಾಖ್ಯಾನಿಸಬೇಕು. ಅಂದರೆ 'ನಿನ್ನನ್ನು ಪ್ರಸಿದ್ಧಿಗೊಳಿಸು; ನನ್ನನ್ನು ಅಪ್ರಸಿದ್ಧನನ್ನಾಗಿ ಮಾಡು' ಎಂದರ್ಥ.

'ಶಿವಾದಿವಿಷಯತ್ವಾತ್' - ಸ್ಕಾಂದಪುರಾಣವನ್ನು ಶಿವವಿಷಯಕವೆಂದು ಹೇಳಿದ್ದರಿಂದ, ಶೈವೇ ಎಂಬ ಪದಕ್ಕೆ 'ಶಿವವಿಷಯಕ'ವೆಂದು ವ್ಯಾಖ್ಯಾನಿಸಿದಂತಾಯಿತು. ಸ್ಕಾಂದ-ಪುರಾಣಾದಿಗಳನ್ನು ವೇದವ್ಯಾಸದೇವರು ರಚಿಸಿದ್ದರಿಂದ ಮೋಹಕ್ಕೋಸ್ಕರ ರುದ್ರದೇವರಿಂದ ರಚಿಸಲ್ಪಟ್ಟ ಪಾಶುಪತಾದಿಶಾಸ್ತ್ರಗಳಿಗಿಂತ ವಿಲಕ್ಷಣವಾಗಿವೆ ಎಂದು ತಿಳಿಯುತ್ತದೆ. 'ಕರಣೈಃ' ಎಂಬ ಪದಕ್ಕೆ ಕ್ರೀಡಾಸಾಧನಗಳಿಂದ ಎಂದರ್ಥ. 'ಸ್ವವಿರೋಧೇನ'- ರುದ್ರದೇವರಿಂದಲೇ ಪ್ರತಿಪಾದಿಸಲ್ಪಟ್ಟ ವಿಷ್ಣುಸರ್ವೋತ್ತಮತ್ವದ ವಿರೋಧ ಬರುವುದರಿಂದ. ಒಂದು ವೇಳೆ ರುದ್ರಾದಿಗಳೇ ಉತ್ತಮರೆಂದು ಹೇಳಿದರೆ ವಿಷ್ಣುಸರ್ವೋತ್ತಮತ್ವದಿಂದ ವಿರೋಧ ಬರುತ್ತದೆ. 'ಅಸಾಧಾರಣ್ಯೇನ' - ಶೈವಾದ್ಯಾಗಮಗಳಲ್ಲಿ ರುದ್ರದೇವರೇ ಮುಖ್ಯವಾಗಿ ಪ್ರತಿಪಾದ್ಯರಾದ್ದರಿಂದ. ರುದ್ರಾದಿಗಳಿಗೆ ಸರ್ವೋತ್ತಮತ್ವವನ್ನು ಅಸಾಧಾರಣ್ಯದಿಂದ

ಪ್ರತಿಪಾದಿಸುವುದಕ್ಕಾಗಿ ಇಲ್ಲದ್ದನ್ನೂ ಸಹ ಹೇಳಬೇಕು ಎಂದು ಅಭಿಪ್ರಾಯ. 'ತಥಾ' ಎಂಬ ಶಬ್ದವು ಅನುವಾದವಾಗಿದೆ. ಭಾಷ್ಯದಲ್ಲಿರುವ 'ಉಕ್ತಮ್' ಎಂಬ ಶಬ್ದಕ್ಕೆ ಪ್ರತ್ಯುಕ್ತಮ್ ಎಂದು ವ್ಯಾಖ್ಯಾನಿಸಿದ್ದಾರೆ. ''ಉಚ್ಯತೇ''- ವೈಷ್ಣವಗ್ರಂಥಗಳಲ್ಲಿಯೂ ಸಹ ವಿಷ್ಣುವು ರುದ್ರನನ್ನು ಕುರಿತು ಮಾಡುವ ಅನೇಕ ಸ್ತೋತ್ರಗಳಿವೆಯಲ್ಲವೇ?

''ಆರಾಧ್ಯ ದೇವದೇವೇಶಂ ಶಂಕರಂ ಲೋಕಶಂಕರಮ್ ।
ತಪಸಾ ತೋಷಯಿತ್ವಾ ತಂ ಕೈಲಾಸಗಿರಿವಾಸಿನಮ್ ।
ರುಕ್ಮಿಣ್ಯಾಸ್ತನಯಂ ಲೇಭೇ ದಗ್ಧಂ ಕಾಮಂ ಪುನರ್ಹರಿಃ ॥''

''ಕೃಷ್ಣಪರಮಾತ್ಮನು ದೇವತೆಗಳಿಗೂ ದೇವತೆಯಾದ ಲೋಕಕ್ಕೆ ಸುಖವನ್ನುಂಟುಮಾಡುವ, ಕೈಲಾಸಪರ್ವತದಲ್ಲಿ ವಾಸಿಸುವ ಶಂಕರನನ್ನು ಆರಾಧಿಸಿ, ತಪಸ್ಸಿನಿಂದ ಸಂತೋಷಪಡಿಸಿ, ರುಕ್ಮಿಣಿಯಿಂದ ಭಸ್ಮೀಭೂತನಾದ ಕಾಮನನ್ನು ಮಗನನ್ನಾಗಿ ಪಡೆದನು'' ಎಂದು.

''ಬ್ರಹ್ಮಶಬ್ದಶ್ಚ ವಿಷ್ಣಾವೇವ' ಎಂದು ಪ್ರಾರಂಭಿಸಿದ ವಿಷಯವನ್ನು 'ತಸ್ಮಾತ್' ಎಂದು ಉಪಸಂಹಾರ ಮಾಡುತ್ತಿದ್ದಾರೆ. ಅಧಿಕರಣಪ್ರಮೇಯವನ್ನು 'ತದೇವಂ' ಎಂಬ ಗ್ರಂಥದಿಂದ ಉಪಸಂಹಾರ ಮಾಡುತ್ತಿದ್ದಾರೆ. ಸಿದ್ಧಾಂತದ ಫಲವನ್ನು 'ಅತಃ ಶಾಸ್ತ್ರಮಾರಂಭಣೀಯಮೇವ' ಎಂದು ಹೇಳಿದ್ದಾರೆ.

ತಸ್ಮಾತ್‌ಶಾಸ್ತ್ರೇಣ ಜಿಜ್ಞಾಸ್ಯಮ್ ಅಸ್ಮದೀಯಂ ಗುಣಾರ್ಣವಮ್ ।
ವಾಸುದೇವಾಖ್ಯಮದ್ವಂದ್ವಮ್ ಪರಂಬ್ರಹ್ಮಾಖಿಲೋತ್ತಮಮಮ್ ॥

ಇಲ್ಲಿಯ ತನಕ ಸಮರ್ಥಿಸಿದ ವಿಚಾರದಿಂದ ಸರ್ವೋತ್ತಮನೂ, ಅದ್ವಿತೀಯನೂ, ಪರಬ್ರಹ್ಮನೂ ಆಗಿರುವ, ಗುಣಪರಿಪೂರ್ಣನಾದ, ನಮ್ಮ ಪ್ರಿಯತಮನಾದ ವಾಸುದೇವನ ಬಗ್ಗೆ ಜಿಜ್ಞಾಸೆ ಮಾಡಬೇಕು.

॥ ಶ್ರೀಮದ್ವೇಶಾರ್ಪಣಮಸ್ತು ॥

ಶ್ರೀವೇದವ್ಯಾಸಾಯ ನಮಃ
ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯಗುರುಭ್ಯೋ ನಮಃ
ಶ್ರೀಮದ್‌ರಾಘವೇಂದ್ರತೀರ್ಥಗುರುಭ್ಯೋ ನಮಃ
ಶ್ರೀಗುರುಭ್ಯೋ ನಮಃ

# ಬ್ರಹ್ಮಸೂತ್ರ

## ಜನ್ಮಾಧಿಕರಣ

**ब्रह्मसूत्रम् – ।। जन्माद्यस्य यतः ।।१-१-२।।**

ಸೂತ್ರಾರ್ಥ - ಪ್ರತ್ಯಕ್ಷಸಿದ್ಧವಾದ ಸಮಸ್ತಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷಗಳು ಯಾರಿಂದ ಉಂಟಾಗುತ್ತವೋ ಅವನೇ ಬ್ರಹ್ಮನಾಗಿದ್ದಾನೆ.

ಅಸ್ಯ = ಪ್ರಕೃತವಾದ ಜೀವಜಡಾತ್ಮಕವಾದ ಪ್ರಪಂಚಕ್ಕೆ, ಯತಃ = ಯಾರಿಂದ, ಜನ್ಮಾದಿ = ಸೃಷ್ಟ್ಯಾದ್ಯಷ್ಟಕಗಳು, ಆಗುತ್ತವೆಂದು ಶ್ರುತಿಸಿದ್ಧವಾಗಿದೆಯೋ ಅವನೇ ಜಿಜ್ಞಾಸ್ಯ ಬ್ರಹ್ಮ, ಬೇರೆಯವರಲ್ಲ.

॥ ಶ್ರೀವೇದವ್ಯಾಸದೇವರಿಂದ ರಚಿಸಲ್ಪಟ್ಟ ಬ್ರಹ್ಮಮೀಮಾಂಸಾಶಾಸ್ತ್ರದಲ್ಲಿ
ಜನ್ಮಾಧಿಕರಣವು ಸಮಾಪ್ತವಾಯಿತು ॥

* * * * * *

## ಜಗದ್ಗುರು ಶ್ರೀಮಧ್ವಾಚಾರ್ಯರಿಂದ ವಿರಚಿತವಾದ

# ಬ್ರಹ್ಮಸೂತ್ರಭಾಷ್ಯ

## ಜಿಜ್ಞಾಸ್ಯಬ್ರಹ್ಮನ ಲಕ್ಷಣ

**ब्रह्मसूत्रभाष्यम् – (१) ब्रह्मणो लक्षणमाह–**

**।। जन्माद्यस्य यतः ।। २ ।।**

**सृष्टिस्थितिसंहारनियमनज्ञानाज्ञानबन्धमोक्षा यतः ।**

(೧) ಬ್ರಹ್ಮನ ಲಕ್ಷಣವನ್ನು ಸೂತ್ರಕಾರರು 'ಜನ್ಮಾದ್ಯಸ್ಯ ಯತಃ' ಎಂಬುದಾಗಿ ಹೇಳುತ್ತಿದ್ದಾರೆ.

'ಜಗತ್ತಿನ ಉತ್ಪತ್ತಿ, ಪಾಲನೆ, ನಾಶ, ಪ್ರೇರಣೆ, ಜ್ಞಾನ, ಅಜ್ಞಾನ, ಸಂಸಾರಬಂಧನ, ಸ್ವರೂಪಾನಂದಾವಿರ್ಭಾವಗಳು ಯಾರಿಂದ ಆಗುತ್ತವೋ' (ಅವನೇ ಬ್ರಹ್ಮನಾಗಿದ್ದಾನೆ.)

ಪ್ರತಿಪದಾರ್ಥ -- ಜನ್ಮಾಧಿಕರಣ ಪ್ರತಿಪಾದ್ಯವಾದ ಪ್ರಮೇಯವನ್ನು ಬ್ರಹ್ಮಣಃ ಎಂಬ ಭಾಷ್ಯದಿಂದ ತೋರಿಸುತ್ತಿದ್ದಾರೆ. ಬ್ರಹ್ಮಣಃ = ತೈತ್ತಿರೀಯಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮನ, ಲಕ್ಷಣಂ = ಲಕ್ಷಣ ಸಮುದಾಯವನ್ನು, ಆಹ = ಸೂತ್ರಕಾರರು 'ಜನ್ಮಾದ್ಯಸ್ಯ ಯತಃ ಎಂಬುದಾಗಿ ಹೇಳುತ್ತಿದ್ದಾರೆ.

ಸೃಷ್ಟಿ = ಅನೇಕವಿಧವಾದ ಜಗತ್ತಿನ ಉತ್ಪತ್ತಿಯು, ಸ್ಥಿತಿ = ರಕ್ಷಣೆಯು, ಸಂಹಾರ = ನಾಲ್ಕುವಿಧನಾಶವು, ನಿಯಮನ = ಪ್ರೇರಣೆಯು, ಜ್ಞಾನ = ಜ್ಞಾನವು, ಅಜ್ಞಾನ = ಅಜ್ಞಾನವು, ಬಂಧ = ಸಂಸಾರಬಂಧನವು, ಮೋಕ್ಷ = ಸ್ವರೂಪಾನಂದಾವಿರ್ಭಾವವು, ಯತಃ = ಯಾರಿಂದ, ಭವಂತಿ = ಆಗುತ್ತವೋ, (ತತ್ = ಅವನೇ ತೈತ್ತಿರೀಯಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮನು)

## ಶ್ರೀಮಜ್ಜಯತೀರ್ಥಭಿಕ್ಷುಗಳಿಂದ ವಿರಚಿತವಾದ ತತ್ವಪ್ರಕಾಶಿಕಾ

## ಜನ್ಮಾಧಿಕರಣಕ್ಕೆ ಸಂಗತಿವಿಚಾರ

**तत्वप्रकाशिका – अत्र श्रुत्यक्तब्रह्मणो विष्णुत्वसमर्थनादस्ति शास्त्रसङ्गतिः । श्रुत्यादिसङ्गतिस्तु 'तद् विजिज्ञासस्व तद् ब्रह्म' (तै-३-१) इति श्रुत्युक्तं ब्रह्म जिज्ञास्यमित्युक्तं तस्य च विष्णुत्वं यावन्न साध्यते तावत् तस्य गुणपूर्त्यसिद्ध्या भेदकाभावेन जिज्ञास्यता न सम्भवतीति ।**

ಈ ಜನ್ಮಾಧಿಕರಣದಲ್ಲಿ ತೈತ್ತಿರೀಯಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮನಿಗೆ ವಿಷ್ಣುತ್ವವನ್ನು ಸಮರ್ಥಿಸುತ್ತಿರುವುದರಿಂದ ಶಾಸ್ತ್ರಸಂಗತಿಯು ಇರುತ್ತದೆ.

'ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ಶ್ರುತಿಯಲ್ಲಿ ಹೇಳಲ್ಪಟ್ಟ ಬ್ರಹ್ಮನು ವಿಚಾರಕ್ಕೆ ಅರ್ಹನಾಗಿದ್ದಾನೆಂದು ಹಿಂದಿನ ಅಧಿಕರಣದಲ್ಲಿ ಹೇಳಿದ್ದಾಯಿತು. ಆದರೆ ಬ್ರಹ್ಮಪದದಿಂದ

ವಿಷ್ಣುವೇ ಪ್ರತಿಪಾದ್ಯನೆಂದು ಎಲ್ಲಿಯ ತನಕ ಸಮರ್ಥಿಸುವುದಿಲ್ಲವೋ ಅಲ್ಲಿಯ ತನಕ ಬ್ರಹ್ಮನು ಗುಣಪೂರ್ಣನೆಂದು ನಿಶ್ಚಯವಾಗುವುದಿಲ್ಲ. ಇದು ನಿಶ್ಚಯವಾಗದ ಹೊರತು ಭೇದವನ್ನು ತಿಳಿಸುವ ಧರ್ಮವಿಲ್ಲದ ಪ್ರಯುಕ್ತ ಜೀವಭಿನ್ನನೆಂದು ನಿಶ್ಚಯವಾಗುವುದಿಲ್ಲ. ಆದ್ದರಿಂದ ಬ್ರಹ್ಮನಿಗೆ ಜಿಜ್ಞಾಸ್ಯತ್ವವೇ ಕೂಡುವುದಿಲ್ಲ. ಈ ಅಧಿಕರಣದಲ್ಲಿ ಬ್ರಹ್ಮನಿಗೆ ಗುಣಪೂರ್ಣತ್ವವನ್ನು ಸಮರ್ಥಿಸುವುದರಿಂದ ಶ್ರುತಿಸಂಗತಿ ಅಧಿಕರಣ ಸಂಗತಿಗಳು ಇವೆಯೆಂದು ತಿಳಿಯಬೇಕು.

## ಸಂಶಯ - ಪೂರ್ವಪಕ್ಷ

**तत्वप्रकाशिका – तच्छ्रुत्युक्तं ब्रह्माऽत्र विषयः । 'किं विष्णुरुत जीवः?' इति सन्देहः । उभयत्रापि ब्रह्मपदप्रयोग एव सन्देहबीजम् ।**

ತೈತ್ತಿರೀಯಶ್ರುತಿಯಲ್ಲಿ ಪ್ರತಿಪಾದ್ಯನಾದ ಬ್ರಹ್ಮನೇ ಈ ಅಧಿಕರಣಕ್ಕೆ ವಿಷಯ. ಬ್ರಹ್ಮಪದದ ಅರ್ಥ ವಿಷ್ಣುವೋ ಅಥವಾ ಜೀವನೋ ? ಎಂಬುದು ಸಂದೇಹ. ಎರಡೂ ಕಡೆಯಲ್ಲಿ ಬ್ರಹ್ಮಪದ ಪ್ರಯೋಗವಿರುವುದೇ ಸಂದೇಹಬೀಜ.

**तत्वप्रकाशिका – यद्यपि पूर्वाधिकरणे विष्णावेव ब्रह्मशब्दो मुख्य इत्युक्तम् तथापि स्वकृतव्याख्यानस्थापनाय भाष्यकारैरेवोक्तत्वाद् भवति सन्देहः ।**

ವಸ್ತುತಃ ಹಿಂದಿನ ಅಧಿಕರಣದಲ್ಲಿ ಬ್ರಹ್ಮಶಬ್ದವು ವಿಷ್ಣುವಿನಲ್ಲೇ ಮುಖ್ಯವಾಗಿದೆಯೆಂದು ಹೇಳಿದ್ದಾಯಿತು. ಆದರೆ ಭಾಷ್ಯಕಾರರಷ್ಟೇ ತಮ್ಮ ವ್ಯಾಖ್ಯಾನ ಸಮರ್ಥಿಸಲು ಬ್ರಹ್ಮಶಬ್ದವನ್ನು ವಿಷ್ಣುವಿನಲ್ಲಿ ಸಮರ್ಥಿಸಿದ್ದರು. ಸೂತ್ರಕಾರರು ಸಮರ್ಥಿಸಿರಲಿಲ್ಲ. ಆದ್ದರಿಂದ ಸೂತ್ರಕಾರರಿಗೆ ಸಮ್ಮತವಿದೆಯೋ ಇಲ್ಲವೋ ? ಎಂಬ ಸಂದೇಹವು ಬರುತ್ತದೆ.

**तत्वप्रकाशिका – 'जीव एवेदं ब्रह्म' इति पूर्वः पक्षः । 'बृहजातिजीव....' इति ब्रह्मशब्दस्य जीवे रूढत्वात् । यद्यपि ब्रह्मशब्दो विष्णौ प्रवर्तते तथापि तस्य तत्र योगेनैव प्रवृत्तेः । 'रुढियोगयोश्च रुढेरेव बलवत्त्वात्' जीववाचित्वमेव मुख्यम् । न च रुढिपरित्यागेन योगाङ्गीकारो युक्तः । 'बाधकं विना मुख्यार्थत्यागायोगात्' । न चात्र तादृशं बाधकमस्ति । तस्मात् (जात्यादेर्मुख्यतोऽ-**

**जिज्ञास्यत्वात् देहात्मविवेकस्यावश्यकत्वात्)**(१) **जीव एवेदं ब्रह्म । तस्य च स्वप्रकाशत्वेनासन्दिग्धत्वादजिज्ञास्यतेति ।**

ಪೂರ್ವಪಕ್ಷ - 'ತದ್‌ಬ್ರಹ್ಮ' ಎಂಬ ಶ್ರುತ್ಯುಕ್ತಬ್ರಹ್ಮನು ಜೀವನೇ ಆಗಿದ್ದಾನೆ. ಏಕೆಂದರೆ 'ಬೃಹಜಾತಿಜೀವ.......' ಎಂಬ ಕೋಶದಂತೆ ಬ್ರಹ್ಮಶಬ್ದವು ಜೀವನಲ್ಲಿ ರೂಢವಾಗಿದೆ. ವಸ್ತುತಃ ವಿಷ್ಣುವಿನಲ್ಲೇ ಬ್ರಹ್ಮಶಬ್ದವಿದ್ದರೂ ಯೋಗದಿಂದಷ್ಟೇ ಇದೆ ರೂಢಿಯಿಂದ ಇರುವುದಿಲ್ಲ. ರೂಢಿ ಮತ್ತು ಯೋಗಗಳಲ್ಲಿ ರೂಢಿಯೇ ಪ್ರಬಲವಾದ್ದರಿಂದ ಬ್ರಹ್ಮಶಬ್ದದಿಂದ ಜೀವನೇ ಮುಖ್ಯಪ್ರತಿಪಾದ್ಯನಾಗುತ್ತಾನೆ. ರೂಢಿಯನ್ನು ಪರಿತ್ಯಾಗ ಮಾಡಿ ಯೋಗವನ್ನು ಅಂಗೀಕರಿಸುವುದು ಸಮಂಜಸವಲ್ಲ. ಏಕೆಂದರೆ ಬಾಧಕಪ್ರಮಾಣವಿಲ್ಲದೆ ಮುಖ್ಯಾರ್ಥವೆನಿಸಿದ ರೂಢಿಯನ್ನು ಪರಿತ್ಯಾಗ ಮಾಡಬಾರದು. ಪ್ರಕೃತ ಅಂತಹ ಬಾಧಕವೇನೂ ಇರುವುದಿಲ್ಲ. ಆದ್ದರಿಂದ ಜೀವನೇ ಬ್ರಹ್ಮಶಬ್ದಪ್ರತಿಪಾದ್ಯನು. ಅಂತಹ ಜೀವನು ಸ್ವಪ್ರಕಾಶನಾದ್ದರಿಂದ ನಿಶ್ಚಿತನಾಗಿದ್ದಾನೆ. ನಿಶ್ಚಿತನಾದ ಜೀವನ ವಿಷಯದಲ್ಲಿ ವಿಚಾರವು ಕೂಡುವುದಿಲ್ಲ.

## ಸಿದ್ಧಾಂತ

**तत्वप्रकाशिका – अथ सिद्धान्तयत् सूत्रमवतारयति – ब्रह्मण इति**(२) **॥ 'निर्बाधरूढिबलात् जीव एवेदं ब्रह्मेति प्राप्ते तन्निराकर्तुं जीवग्रहणे बाधकं श्रुत्युक्तं जिज्ञास्यब्रह्मणो लक्षणमाह सूत्रकारः' इत्यर्थः ।**

ಈ ಪೂರ್ವಪಕ್ಷವನ್ನು ನಿರಾಕರಿಸುವ ಸಿದ್ಧಾಂತವನ್ನು ತೋರಿಸುವುದಕ್ಕಾಗಿ ಸೂತ್ರಕ್ಕೆ ಭಾಷ್ಯಕಾರರು ಅವತಾರಿಕೆಯನ್ನು ನೀಡುತ್ತಿದ್ದಾರೆ – 'ಬ್ರಹ್ಮಣಃ' ಎಂಬುದಾಗಿ. 'ಬಾಧಕವಿಲ್ಲದ

(1) ಈ ವಾಕ್ಯ ಪ್ರಕ್ಷಿಪ್ತವೆಂದು ಭಾವದೀಪದಲ್ಲಿ ಸಮರ್ಥಿಸಿದ್ದಾರೆ.

(२) 'ब्रह्मणो लक्षणमाह' इति वदन् भाष्यकारः पूर्वाधिकरणोक्तसिद्धान्तसमर्थनार्थं तत्रैव स्वभाष्ये प्रपञ्चितमखिलमनुपमृद्यैव 'लक्षणप्रमाणाभ्यां वस्तुसिद्धिः' इति वचनात् तयोरभावात् कथं तस्य पूर्वाधिकरणोक्तजिज्ञासा इत्यभ्यधिकशङ्कां परिहर्तुं क्रमेण जन्मादिकारणत्वाख्यलक्षणं तद्वत्त्वे सच्छास्त्राख्यप्रमाणं च समर्थयितुमुत्तराधिकरणद्वय-मित्यपि सङ्गतिं सूचितवान् । अतो न ग्रन्थद्वयस्यापि वैयर्थ्यमिति ज्ञेयम् । **(गुर्वर्थदीपिका)**

ರೂಢಿಯ ಬಲದಿಂದ ಜೀವನೇ ಬ್ರಹ್ಮಶಬ್ದಪ್ರತಿಪಾದ್ಯನು' ಎಂಬ ಪೂರ್ವಪಕ್ಷವನ್ನು ನಿರಾಕರಿಸಲು ಜೀವನ ವಿಷಯದಲ್ಲಿ ಬಾಧಕವಾಗಿರುವ ಶ್ರುತಿಪ್ರತಿಪಾದ್ಯನಾದ ಜಿಜ್ಞಾಸ್ಯನಾದ ಬ್ರಹ್ಮನ ಲಕ್ಷಣವನ್ನು ಸೂತ್ರಕಾರರು ಹೇಳುತ್ತಿದ್ದಾರೆಂದು 'ಬ್ರಹ್ಮಣೋ ಲಕ್ಷಣಮಾಹ' ಎಂಬ ಮಾತಿಗೆ ಅರ್ಥ.

**तत्वप्रकाशिका – अस्य = जगतो जन्म । 'आदिपदोक्ते स्थितिसंहृती यतः, तद् ब्रह्म' इत्यादिप्रतीतिनिरासाय सूत्रं यथावद् व्याचष्टे – सृष्टीति ।।**

ಸೂತ್ರದಲ್ಲಿರುವ 'ಅಸ್ಯ' ಎಂಬ ಪದಕ್ಕೆ 'ಜಗತ್ತಿನ' ಎಂದರ್ಥ. 'ಜನ್ಮ' ಎಂಬ ಪದಕ್ಕೆ ಉತ್ಪತ್ತಿ ಎಂದರ್ಥ. ಆದಿ'ಪದದಿಂದ 'ಸ್ಥಿತಿ ಮತ್ತು ಸಂಹಾರಗಳೆರಡನ್ನೇ ಇಟ್ಟುಕೊಂಡಾಗ ಜಗತ್ತಿನ ಉತ್ಪತ್ತಿ ಸ್ಥಿತಿ ಸಂಹಾರಗಳು ಯಾರಿಂದ ಆಗುತ್ತವೋ ಅವನೇ ಬ್ರಹ್ಮನೆಂಬ ತಪ್ಪು ಅರ್ಥವು ತೋರುತ್ತದೆ. ಇದನ್ನು ನಿರಾಕರಿಸುವುದಕ್ಕಾಗಿ ಸೂತ್ರದ ಯಥಾರ್ಥವ್ಯಾಖ್ಯಾನವನ್ನು 'ಸೃಷ್ಟಿ' ಇತ್ಯಾದಿ ಭಾಷ್ಯವು ಮಾಡುತ್ತಿದೆ.

**तत्वप्रकाशिका – सृष्ट्याद्यष्टकम् अस्य = जगतो यतो भवति, तदेव जिज्ञास्यं ब्रह्मोच्यते । तल्लक्षणं च विष्णावेव सम्भवति, न जीवे । अतो ब्रह्मशब्दस्य जीवे रूढत्वेऽपि, बाधकसद्भावात् 'तद् ब्रह्म' इति श्रुत्युक्तं ब्रह्म विष्णुरेवेति युक्तैव प्रागुक्तजिज्ञासेत्यर्थः ।**[१]

(१) **भावरत्नकोशः** - 'जन्माद्यस्य यतः' इत्येकं सूत्रं एकमधिकरणम् । तच्छरीरमेवं द्रष्टव्यम् । अत्र 'तद्विजिज्ञासस्व तद्ब्रह्म' इति श्रुत्युक्तब्रह्मणो विष्णुत्वसमर्थनादस्ति शास्त्रसङ्गतिः । श्रुत्यादिसङ्गतिस्तु 'तद्विजिज्ञासस्व तद्ब्रह्म' इति श्रुत्युक्तं ब्रह्म जिज्ञास्यमित्युक्तं, तस्य विष्णुत्वं यावन्न साध्यत तावत्तस्य गुणपूर्त्यसिध्या जीवाद्भेदकाभावेन जिज्ञास्यत्वं न सम्भवतीति आक्षेपिकीसङ्गतिः । 'तद्विजिज्ञासस्व तद्ब्रह्म' इति तैत्तिरीयश्रुत्युक्तं ब्रह्म अत्र विषयः । किं जीवः उत विष्णुरिति सन्देहः ।

**पूर्वपक्षस्तु** - जीव एवेदं ब्रह्म 'बृहजातिजीवकमलासनशब्दराशिषु' इत्यभिधानेन ब्रह्मशब्दस्य जीवे रूढत्वात् 'तदेव ब्रह्म परमं कवीनाम्' इत्यादिश्रुत्या विष्णौ ब्रह्मशब्द-प्रवृत्त्या वेदनेऽपि तस्य 'अथ कस्मादुच्यते ब्रह्मेति, बृहन्तो ह्यस्मिन् गुणाः' इति श्रुतिप्रतिपन्नयोगवृत्त्यैव प्रवृत्तत्वात् । रूढियोगयोश्च रूढेरेव अवयवार्थनिरपेक्षायाः तत्सापेक्षायोगात् बलीयस्त्वस्य रथकाराधिकरणे स्थितत्वात् । न जीवेऽपि यौगिक एव

अयं न रूढः । अभिधानमपि योगवृत्त्याशयमस्त्विति वाच्यम् । यौगिकार्थस्य गुणपूर्तेः जीवेऽसम्भवात् । सम्भवे वा जिज्ञास्यत्वेनाभिमतस्य जीवाद्भेदासिद्धेः गुणपूर्तितोऽन्यस्य यौगिकार्थत्वे तु जिज्ञास्यस्यापि गुणपूर्त्यसिद्धेः । न च जिज्ञास्येऽपि रूढिस्तु इति वाच्यम् । तथात्वे गुणपूर्त्यसिद्धिप्रसङ्गात् । न च तत्र योगरूढिरस्तु, सा च केवलरूढितो बलवतीति वाच्यम् । 'बृहन्तो ह्यस्मिन् गुणाः' इति श्रुत्यनुसारिकॢप्तावयवशक्त्यैवोपपत्तौ समुदायशक्तौ मानाभावात् । न च 'तदेव ब्रह्म परमं कवीनाम्' इति श्रुतिः तत्र मानमिति वाच्यम् । केवलयोगेनापि तच्छ्रुत्युपपत्तेरित्युक्तत्वात् । किञ्च 'तदेव ब्रह्म परमम्' इत्यादौ जीवे रूढिबाधकसमुद्रशायित्वलिङ्गात् विष्णुपरत्वेऽपि 'तद्विजिज्ञासस्व तद्ब्रह्म' इत्यत्र रूढिबाधकाभावात् न तत्परता स्वीकार्या । न चात्र जीवपरत्वे 'यतो वा इमानि' इति पूर्ववाक्योक्तकारणत्वमेव बाधकमिति वाच्यम् । विद्वद्युद्देशगत-ब्रह्मशब्दस्वारस्याय जीवस्यापि अदृष्टद्वारा वा जगतो जीवकल्पितत्वेनात्र हेतुत्वोपपत्तेः । ब्रह्मणो निष्क्रियत्वेन कर्तृत्वस्य निर्विकारत्वेन उपादानत्वस्य वा असम्भवेन कारणत्वस्य ब्रह्मपक्ष एव बाधकत्वाच्च । तस्मात् जीव एवेदं ब्रह्म । तस्य च स्वप्रकाशत्वेन असन्दिग्धत्वात् अजिज्ञास्यतेति ।

**सिद्धान्तस्तु** - विष्णुरेव इदं जिज्ञास्यं ब्रह्म 'स इदं सर्वमसृजत' इति, 'स हि सर्वस्य कर्ता' इति, 'सत्यकर्मा' इति, 'स इमान् लोकान् असृजत' इति, 'य उ त्रिधातु पृथिवीमुतद्यां एको दाधार भुवनानि विश्वा', 'चतुर्भि' साकं नवतिं च नामभिश्चक्रं न वृत्तं व्यतीरंवीविपत्' 'सर्वं वा अत्तीति च' 'यमप्येति भुवनं साम्पराये' 'य आत्मानमन्तरो यमयति' 'त्वं मुक्तिदो बन्धदोऽतो मतो नस्त्वं ज्ञानदोऽज्ञानदश्चासि विष्णो' इत्यादिश्रुतिभिः 'उत्पत्तिस्थितिसंहारनियतिर्ज्ञानमावृतिः बन्धमोक्षौ च पुरुषात् यस्मात् स हरिरेकराट्' इत्यादिस्मृतिभिश्च विष्णवेकनिष्ठतया अवगतस्य जगज्जन्मादि-कारणत्वस्य जिज्ञास्ये 'यतो वा इमानि भूतानि जायन्ते । येन जातानि जीवन्ति । यत्प्रयन्ति अभिसंविशन्ति' इति श्रवणात् । तस्य च जीवे अनुपपत्त्या रूढेरपि बाधात् । अदृष्टद्वारा कल्पकत्वेन वा जीवस्य कारणत्वाभ्युपगमे च जायन्ते जातानीत्यादि पदानां मुख्यार्थत्यागापत्तेः । अभिसंविशन्तीति श्रवणात् तत्पदोक्तमुक्तप्राप्यत्वस्य च सर्वथानुपपत्तेः । यत इति येनेति यदिति, तद्ब्रह्मेति च प्रतीतकारणैक्यस्य च बाधाभावात् । इमानीति सर्वनाम्नश्च सङ्कोचाभावेन जीवकर्तृककार्यजातस्यैव ग्रहणमित्यस्य च अयुक्तत्वात् । जीवकर्तृतायाश्च 'इतरव्यपदेशाद्धिताकरणादिदोषप्रसक्तिः' इत्यादिसूत्रेषु निराकरिष्यमाणत्वात् । 'सोऽन्वेष्टव्यः । स विजिज्ञासितव्य' इत्यन्वेषणविधिवाक्योपात्तापहतापाप्मत्वादीनां जीवे शुद्धरूपाभिप्रायेण सम्भवाशङ्कायामपि सत्यकामत्वादीनां सर्वथाऽनुपपत्तेः, निष्क्रियत्वश्रुतेश्च

'स हि सर्वस्य कर्ता' इत्याद्युदाहृतकर्तृत्वप्रतिपादकश्रुतिबाहुल्यात् 'अकर्माऽक्लिष्टकारित्वात्' इत्यादि स्मृत्यनुसारिणाक्लिष्टकारित्वादिनोपपत्तेश्च । किञ्च कवीनां मते 'तदेव ब्रह्म परमम्' इति श्रुतौ विद्वद्रूढिरेव विदिता तद्बलेनापि जिज्ञास्यश्रुतौ ब्रह्मशब्दो विष्णुवाचक इत्येव स्वीकार्यम् । न चैवं रूढत्वाङ्गीकारे तेन गुणपूर्त्यलाभप्रसङ्ग इति वाच्यम् । 'बृहन्तो ह्यस्मिन् गुणा' इति श्रुत्या योगस्याप्यावेदिततया गुणपूर्तिलाभात् । पङ्कजादिशब्देषु रूढेरनतिप्रसङ्गेऽपि प्रमितत्वात् योगवत्प्रकृते योगस्यानतिप्रसक्तत्वेऽपि 'तदेव' इति श्रुतिप्रमापिता रूढिरपि अस्तु । रूढिं विना परमपदोक्तमुख्यत्वानुपपत्तेः । विद्वद्रूढेश्च भूवराहादिशब्दानां प्रियङ्गुवायसादिषु म्लेञ्छप्रसिद्धिशब्दिताज्ञरूढितोऽपि दीर्घशूकसूकरादिषु आर्यप्रसिद्धिशब्दितप्राज्ञरूढेः बलीयस्त्वस्य यववाराधिकरणे स्थितत्वात् मुख्यत्वाविशेषेऽपि लक्षणात् गौण्या इव लक्षणत्वाविशेषेऽपि लक्षणमात्रनिरूढलक्षणाया इव मुख्यत्वादिवशेषेऽपि योगरूढेरिव च रूढित्वाविशेषेऽपि अविद्वद्रूढितो विद्वद्रूढेरेव असम्भाविताज्ञानमूलिकायाः बलीयस्त्वोपपत्तेश्च 'नारायणोऽसौ परमो विचिन्त्यः' 'नारायणं महाज्ञेयम्' इत्यादिश्रुतौ जिज्ञास्ये नारायणशब्दश्रवणाच्च तस्माद्विष्णुरेव जिज्ञास्यं ब्रह्म न जीवोऽतो युक्तैव ब्रह्मजिज्ञासा इति । फलं तु पूर्वोत्तरपक्षयोः पूर्वोक्तजिज्ञासापेक्षसमाधाने इति स्फुटम् ॥२॥

(सूत्रार्थसङ्ग्रहः)

**सूत्राक्षरार्थस्तु** - अस्य प्रत्यक्षादिप्रमाणसिद्धतया प्रकृतस्य चिदचिदात्मकप्रपञ्चस्य जन्मादीति तद्गुणसंविज्ञान बहुव्रीहिः । उत्पत्तिस्थिति विनाशहानोपादानादिप्रवृत्ति-ज्ञानाज्ञानबन्धमोक्षलक्षणधर्माष्टकं यथासम्भवं यतो भवति तदिति अध्याहर्तव्यम् । पूर्वसूत्रात् ब्रह्मेति बुद्ध्या विविक्तमनुवर्तते 'तद्ब्रह्मे'ति । यद्यपि चेतनस्थानि सुखदुःखादीनि, अचेतनस्थानि वृद्धिह्रासादीनि च प्रपञ्चगतानि भगवत्कर्तृकाणि धर्मजातानि सन्ति । तथापि विचारविधायकनानावाक्यपरामर्शेन स्कान्दे सूत्रकृतैव अष्टकर्तृत्वस्यैव लक्षणत्वेनोक्तत्वादत्रापि तस्यैव विवक्षणीयत्वमित्याशयेन भाष्यटीकयोरष्टकोक्तिर्युक्ता । अथवा सर्वैर्मुमुक्षुभिः विशिष्टजन्माद्यष्टकर्तृत्वस्यैव अन्यकर्तृत्वस्य ज्ञेयत्वनियमाभावात् न अन्यदादिशब्दार्थः ।

उक्तं च -

'सृष्टिराक्षाहृतिज्ञाननियत्यमानबन्धनान् ।
मोक्षं च विष्णुतश्चैव ज्ञात्वा मुक्तिर्नचान्यथा ।।' इति ।

'तस्मादष्टकमेवात्र सूत्रे जन्मादिशब्दार्थ' इति सुधाचन्द्रिकयोर्व्यक्तम् । यद्यपि जगज्जन्मकर्तृत्वं जगद्रक्षणकर्तृत्वमित्यादिकं प्रत्येकमेव लक्षणं लक्ष्यनिर्धारणस्येष्टे । तथापि

'ಜನ್ಮ'ಶಬ್ದದಿಂದ ಸೃಷ್ಟ್ಯಾದ್ಯಷ್ಟಕಗಳನ್ನು ವಿವಕ್ಷಿಸಬೇಕು. "ಅಸ್ಯ = ಜಗತ್ತಿನ, ಜನ್ಮಾದಿ = ಸೃಷ್ಟಿ, ಸ್ಥಿತಿ, ಸಂಹಾರ, ನಿಯಮನ, ಜ್ಞಾನ, ಅಜ್ಞಾನ, ಬಂಧ, ಮೋಕ್ಷ ಈ ಎಂಟು ಧರ್ಮಗಳು ಯಾರಿಂದ ಪ್ರಾಪ್ತವಾಗುತ್ತವೋ ಅವನೇ ಜಿಜ್ಞಾಸ್ಯನಾದ ಬ್ರಹ್ಮನಾಗಿದ್ದಾನೆ" ಎಂದು. ಈ ಲಕ್ಷಣವು ವಿಷ್ಣುವಿನಲ್ಲೇ ಬರುತ್ತದೆ ಹೊರತು ಜೀವನಲ್ಲಿ ಬರುವುದಿಲ್ಲ. ಆದ್ದರಿಂದ ಜೀವನಲ್ಲಿ ಬ್ರಹ್ಮಶಬ್ದವು ರೂಢವಾಗಿದ್ದರೂ ಬಾಧಕವಿರುವುದರಿಂದ (ಸೃಷ್ಟ್ಯಾದ್ಯಷ್ಟಕರ್ತೃತ್ವಗಳಿಲ್ಲದಿರುವುದರಿಂದ) 'ತದ್ ಬ್ರಹ್ಮ' ಎಂಬ ಶ್ರುತಿಪ್ರತಿಪಾದ್ಯನಾದ ಬ್ರಹ್ಮನು ವಿಷ್ಣುವೇ ಆಗುತ್ತಾನೆ. ಆದ್ದರಿಂದ ಹಿಂದಿನ ಅಧಿಕರಣದಲ್ಲಿ ಹೇಳಿದ ಜಿಜ್ಞಾಸೆಯು ಯುಕ್ತವೇ ಆಗಿದೆ. ಇಷ್ಟು ಭಾಷ್ಯದ ಅಭಿಪ್ರಾಯ.

## ಮಂತ್ರಾಲಯ ಪ್ರಭುಗಳಾದ ಶ್ರೀರಾಘವೇಂದ್ರತೀರ್ಥಶ್ರೀಪಾದರಿಂದ ವಿರಚಿತವಾದ

## ಭಾವದೀಪ

### ಸಂಗತಿಯ ಬಗ್ಗೆ ಹೆಚ್ಚಿನ ಮಾಹಿತಿ

**भावदीपः – जन्माद्यस्य यतः ।।** प्रत्यधिकरणं प्रतिपाद्यज्ञानेन स्पष्टत्वाद् भाष्यानुक्तामपि अन्तर्भावसङ्गतिं स्वयमाह – अत्रेति ।। 'एतदधिकरणे' इत्यर्थः ।

ಪ್ರತಿಯೊಂದು ಅಧಿಕರಣದಲ್ಲಿಯೂ ಪ್ರತಿಪಾದಿಸಲ್ಪಡುವ ವಿಷಯವು ಸ್ಪಷ್ಟವಾಗಿರುವುದರಿಂದ ಭಾಷ್ಯದಲ್ಲಿ ಹೇಳದಿದ್ದರೂ ತಾವೇ ಅಂತರ್ಭಾವಸಂಗತಿಯನ್ನು

वैभवादष्टौ लक्षणान्यपि उक्तानीति ज्ञातव्यमिति ।।छ।।
'स्तोत्रं राधानां पते गिर्वाहो वीर यस्य ते । विभूतिरस्तु सूनृता'
'एतेनाग्ने ब्रह्मणा वावृधस्व शक्तीं वा यत् ते चकृमा विदा वा ।
उत प्रणेष्यभि वस्यो अस्मात्सन्नः सृज सुमत्या वाजवत्या ।।'
।। इति जन्माधिकरणटीका सेवा ।।

'ಅತ್ರ' ಇತ್ಯಾದಿ ವಾಕ್ಯಗಳಿಂದ ಹೇಳುತ್ತಿದ್ದಾರೆ. 'ಅತ್ರ' ಎಂಬ ಶಬ್ದಕ್ಕೆ 'ಈ ಅಧಿಕರಣದಲ್ಲಿ' ಎಂದು ಅರ್ಥ.

## 'ಶ್ರುತ್ಯುಕ್ತಬ್ರಹ್ಮಣಃ' ಎಂಬ ಟೀಕೆಯ ಸ್ವಾರಸ್ಯ

**भावदीपः – सङ्गतिरिति ।। 'अन्तर्भावरूपा' इत्यर्थः । तदुपपादनम् 'श्रुत्युक्ते'त्यादि । 'ब्रह्मपदवाच्यस्य' इत्येव वाच्ये 'श्रुत्युक्ता' इत्युक्तिः 'सौत्रब्रह्मपदोक्तस्य' इति भ्रमनिरासाय । 'तथा च श्रुत्यर्थनिर्णायक-न्यायग्रथनात्मके शास्त्रे अस्य श्रौत ब्रह्मपदार्थनिर्णायकन्याय-ग्रथनात्मकस्यान्तर्भावो युक्तः' इति भावः ।**

'ಸಂಗತಿ' ಎಂದರೆ ಅಂತರ್ಭಾವರೂಪವಾದ 'ಸಂಗತಿ' ಎಂದು ಅರ್ಥ. 'ಶ್ರುತ್ಯುಕ್ತ' ಇತ್ಯಾದಿ ವಾಕ್ಯಗಳಿಂದ ಅದನ್ನು ವಿವರಿಸುತ್ತಿದ್ದಾರೆ. 'ಬ್ರಹ್ಮಪದವಾಚ್ಯಸ್ಯ' ಎನ್ನದೆ 'ಶ್ರುತ್ಯುಕ್ತಬ್ರಹ್ಮಣಃ' ಎಂದು ಹೇಳಿದ್ದರಿಂದ ಇಲ್ಲಿ ಸೂತ್ರಗತವಾದ ಬ್ರಹ್ಮಪದವನ್ನು ವಿವರಿಸುತ್ತಿದ್ದಾರೆ ಎಂಬ ಭ್ರಮೆಯನ್ನು ನಿರಾಸಮಾಡಿದಂತೆ ಆಗುತ್ತದೆ. ಆದ್ದರಿಂದಲೇ ಶ್ರುತಿಯ ಅರ್ಥವನ್ನು ನಿರ್ಣಯ ಮಾಡುವ ನ್ಯಾಯಗಳ ಸಮೂಹರೂಪವಾದ ಈ ಶಾಸ್ತ್ರದಲ್ಲಿ ಶ್ರುತಿಯಲ್ಲಿ ಹೇಳಿದ ಬ್ರಹ್ಮ ಪದದ ಅರ್ಥವನ್ನು ನಿರ್ಣಯ ಮಾಡುವ ನ್ಯಾಯರೂಪವಾದ ಈ ಸೂತ್ರವು ಅಂತರ್ಭಾವವಾಗುವುದು ಯೋಗ್ಯವಾಗುತ್ತದೆ ಎಂದು ಅರ್ಥ.

ವಿಶೇಷ ವಿಚಾರ - ಭೇದಜ್ಞಾಪಕವಾದದ್ದು ಗುಣಪೂರ್ಣತ್ವವೇ ಆಗಿದೆ. ಆದರೆ ಆ ಗುಣಪೂರ್ಣತ್ವಧರ್ಮವು ಬ್ರಹ್ಮನಲ್ಲಿ ಸಿದ್ಧವಾಗಬೇಕಾದರೆ ಬ್ರಹ್ಮನು ವಿಶ್ವಕರ್ತೃತ್ವರೂಪಧರ್ಮದಿಂದ ಸಮಸ್ತವಸ್ತುಗಳಿಗಿಂತ ಭಿನ್ನನಾಗಿ ತಿಳಿಯಬೇಕು. ಆದ್ದರಿಂದ ಮೊದಲನೆಯ ಸೂತ್ರದಲ್ಲಿ ಹೇಳಿದ ಗುಣಪೂರ್ಣತ್ವಕ್ಕೆ ಉಪಪಾದಕವಾಗಿ ಎರಡನೆಯ ಸೂತ್ರದಲ್ಲಿ ವಿಶ್ವಕರ್ತೃತ್ವವನ್ನು ಹೇಳಲಾಗಿದೆ. ಸುಧಾದಲ್ಲಿಯೂ 'ಅನೇನ ಲಕ್ಷಣೇನ ಲಕ್ಷಿತೇ ಬ್ರಹ್ಮಣಿ ಸಮಸ್ತಗುಣಪೂರ್ಣತ್ವಂ ಪ್ರಥಮಲಕ್ಷಣಂ ಸಿಧ್ಯತಿ' 'ಪ್ರಕೃತವಾದ ವಿಶ್ವಕರ್ತೃತ್ವ ಲಕ್ಷಣದಿಂದ ಬ್ರಹ್ಮನು ಲಕ್ಷಿತನಾದ ಮೇಲೆ ಸಮಸ್ತಗುಣಪೂರ್ಣತ್ವವೆಂಬ ಪ್ರಧಾನಲಕ್ಷಣವು ಬ್ರಹ್ಮನಲ್ಲಿ ಸಿದ್ಧವಾಗುತ್ತದೆ' ಎಂದು.

ಈ ಮಾತುಗಳಿಂದ ಸಂಗತಿಟೀಕೆಯವನ್ನು ವಿವರಿಸಿದಂತಾಯಿತು. ಸಂಗತಿಟೀಕೆ ಹೀಗಿದೆ - 'ಶ್ರುತ್ಯಾದಿಸಂಗತಿಸ್ತು ತದ್ವಿಜಿಜ್ಞಾಸಸ್ವ ತದ್‌ಬ್ರಹ್ಮ' ಇತಿ ಶ್ರುತ್ಯುಕ್ತಂ ಬ್ರಹ್ಮ ಜಿಜ್ಞಾಸ್ಯಮಿತ್ಯುಕ್ತಂ ತಸ್ಯ ಚ ವಿಷ್ಣುತ್ವಂ ಯಾವನ್ನ ಸಾಧ್ಯತೇ ತಾವತ್ತಸ್ಯ ಗುಣಪೂರ್ತ್ಯಸಿದ್ಧ್ಯಾ ಭೇದಕಾಭಾವೇನ ಜಿಜ್ಞಾಸ್ಯತಾ ನ ಸಂಭವತಿ' 'ತದ್ ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬ ಶ್ರುತಿಯಲ್ಲಿ ಹೇಳಿದ ಬ್ರಹ್ಮನು ಜಿಜ್ಞಾಸ್ಯನೆಂದು ಹಿಂದಿನ ಅಧಿಕರಣದಲ್ಲಿ ಹೇಳಿದೆ. ಆದರೆ ಬ್ರಹ್ಮಪದದ ಅರ್ಥ ವಿಷ್ಣು ಎಂದು ಎಲ್ಲಿಯ ತನಕ ನಿಶ್ಚಯವಾಗುವುದಿಲ್ಲವೋ ಅಲ್ಲಿಯತನಕ ಬ್ರಹ್ಮನು ಗುಣಪೂರ್ಣನೆಂದು ನಿಶ್ಚಯವಾಗುವುದಿಲ್ಲ. ಬ್ರಹ್ಮನು ಗುಣಪೂರ್ಣನೆಂದು ನಿಶ್ಚಯವಾಗದ ಹೊರತು ಬ್ರಹ್ಮನಿಗೆ ಜಿಜ್ಞಾಸ್ಯತ್ವವು ಕೂಡುವುದಿಲ್ಲ. ಈ ಅಧಿಕರಣದಲ್ಲಿ ಗುಣಪೂರ್ಣತ್ವವನ್ನು ಸಮರ್ಥಿಸುವುದರಿಂದ ಶ್ರುತ್ಯಾದಿಸಂಗತಿಯು ಇದೆಯೆಂದು ತಿಳಿಯಬೇಕು.

## 'ವಿಷ್ಣುತ್ವ ಸಮರ್ಥನಾತ್' ಎಂಬ ಟೀಕೆಯ ಸ್ವಾರಸ್ಯ

**भावदीपः – विष्णुत्वेति** ।। सिद्धान्ते तस्य रूढिनिरासेन यौगिकत्वमात्रोक्तावपि योगार्थस्य विष्णावेव सम्भवात् 'यौगिकत्व' इत्यनुक्त्या 'विष्णुत्व' इति फलितोक्तिः कृता ।

'ವಿಷ್ಣುತ್ವಸಮರ್ಥನಾತ್' ಎಂಬ ಪದದಿಂದ ಅಂತಿಮವಾದ ಆಶಯವನ್ನು ವ್ಯಕ್ತಪಡಿಸುತ್ತಿದ್ದಾರೆ. ಸಿದ್ಧಾಂತದಲ್ಲಿ ಬ್ರಹ್ಮಪದಕ್ಕೆ ರೂಢಿಯ ಅರ್ಥವನ್ನು ಬಿಟ್ಟು, ಯೌಗಿಕವಾದ ಅರ್ಥವನ್ನೇ ಗ್ರಹಿಸಬೇಕು ಎಂದಷ್ಟೇ ಹೇಳಿದ್ದರೂ ಯೋಗಾರ್ಥವು ವಿಷ್ಣುವಿನಲ್ಲಿ ಮಾತ್ರ ಕೂಡುವುದರಿಂದ 'ಯೌಗಿಕತ್ವ' ಎಂದು ಹೇಳದೇ 'ವಿಷ್ಣುತ್ವ' ಎಂಬುದಾಗಿ ಹೇಳಿದ್ದಾರೆ.

## ಅಧಿಕರಣಸಂಗತಿ ಬಲು ಸ್ಪಷ್ಟ

**भावदीपः – श्रुत्यादीति** ।। 'अधिकरणम्' 'आदि'पदार्थः । सङ्गतिः पूर्वानन्तर्यरूपा । एकवचनं तु 'एकस्य प्रदर्शनेऽन्यस्य सा सुज्ञाना एकप्रकारत्वात् श्रुत्यधिकरणसङ्गत्योः' इति प्रकारैक्यबुद्ध्या । न तु सङ्गत्यैक्यबुद्ध्या । क्वचित् द्विवचनस्यापि प्रयोगात् । पूर्वाधिकरणतद्विषय वाक्याभ्यामेतदधिकरणविषयवाक्ययोः सङ्गती तु इत्यर्थः ।

'ಶ್ರುತ್ಯಾದಿಸಂಗತಿಸ್ತು' ಎಂಬಲ್ಲಿ ಆದಿಶಬ್ದಕ್ಕೆ 'ಅಧಿಕರಣ' ಎಂಬುದಾಗಿ ಅರ್ಥ. 'ಸಂಗತಿ' ಎಂಬ ಪದದಿಂದ ಪೂರ್ವಾನಂತರ್ಯರೂಪವಾದ ಸಂಗತಿಯನ್ನು ಗ್ರಹಿಸಬೇಕು. 'ಸಂಗತಿಃ' ಎಂಬುದಾಗಿ ಏಕವಚನವನ್ನು ಹೇಳಿದ್ದರಿಂದ ಇಲ್ಲಿ ಸಂಗತಿಯು ಒಂದೇ ಆಗಿದೆ ಎಂದು ತಿಳಿಯಬಾರದು. ಒಂದು ಕಡೆ ಸಂಗತಿಯನ್ನು ತೋರಿಸಿದರೆ ಎರಡು ಕಡೆಯ ಸಂಗತಿಗಳೂ ಒಂದೇ ರೀತಿಯಾದ್ದರಿಂದ ಇನ್ನೊಂದು ಕಡೆ ಸಂಗತಿಯನ್ನು ಸ್ಪಷ್ಟವಾಗಿ ಗ್ರಹಿಸಬಹುದು ಎಂಬ ಅಭಿಪ್ರಾಯದಿಂದ ಈ ರೀತಿ ಮಾಡಿದ್ದಾರೆ. ಕೆಲವೊಂದು ಕಡೆ ದ್ವಿವಚನವನ್ನೂ ಕೂಡ ಪ್ರಯೋಗಮಾಡಿದ್ದರಿಂದ ಹೀಗೆ ಗ್ರಹಿಸಬೇಕಾಗಿದೆ. ಹೀಗಾಗಿ ಈ ವಾಕ್ಯಕ್ಕೆ 'ಪೂರ್ವಾಧಿಕರಣ ಮತ್ತು ಅದರ ವಿಷಯವಾಕ್ಯಕ್ಕೂ ಈ ಅಧಿಕರಣ ಮತ್ತು ಇದರ ವಿಷಯವಾಕ್ಯಕ್ಕೂ ಪರಸ್ಪರಸಂಗತಿಗಳನ್ನು' ಎಂಬುದಾಗಿ ಅರ್ಥ.

## ಜಿಜ್ಞಾಸಾಧಿಕರಣ ಸಿದ್ಧಾಂತದ ಆಕ್ಷೇಪ

**भावदीपः – इत्युक्तमिति ।।** 'विषयादिन्यायैः पूर्वाधिकरणे साधितम्' इत्यर्थः । **तस्य** = श्रौतब्रह्मशब्दार्थस्य । **न साध्यत इति** ।। 'रूढित्याजकजन्मादिहेतुत्वरूपबाधकाख्यन्यायोपदर्शनेन' इति भावः ।

'ಇತ್ಯುಕ್ತಮ್' ಎಂದರೆ 'ವಿಷಯಾದಿ ನ್ಯಾಯಗಳಿಂದ ಹಿಂದಿನ ಅಧಿಕರಣಗಳಲ್ಲಿ ಸಾಧಿತವಾಗಿದೆ' ಎಂದು ಅರ್ಥ. 'ತಸ್ಯ' ಎಂಬ ಶಬ್ದಕ್ಕೆ 'ಶ್ರುತಿಯಲ್ಲಿ ಹೇಳಿದ ಬ್ರಹ್ಮಶಬ್ದದ ಅರ್ಥಕ್ಕೆ' ಎಂಬುದಾಗಿ ಅರ್ಥ. 'ನ ಸಾಧ್ಯತೇ' ಎಂಬಲ್ಲಿ ಸಾಧಿಸುವುದು ಎಂದರೆ 'ಜನ್ಮಾದಿಕಾರಣತ್ವರೂಪವಾದ ಬಾಧಕನ್ಯಾಯಗಳು ಇರುವುದರಿಂದ ರೂಢಿಯಲ್ಲಿ ಹೇಳಿದ ಅರ್ಥವನ್ನು ತ್ಯಜಿಸಬೇಕು ಎಂಬುದನ್ನು ಸಾಧಿಸುವುದು' ಎಂದು ಅರ್ಥ.

## ಆಕ್ಷೇಪಿಕಿ ಸಂಗತಿ

**भावदीपः – भेदकाभावेनेति ।।** तथा च 'पूर्वपक्षे जीवस्यैव ब्रह्मतापत्त्या पूर्वत्रेव विषयादिशून्यत्वेन तज्जिज्ञासा पूर्वसूत्रोक्ता न कार्या' इत्याक्षेपाद् आक्षेपिकीसङ्गतिरित्यर्थः; **'पूर्वमाक्षिप्यते यत्र तत्र साक्षेपिकी मता'** इत्युक्तेः ।

ಟೀಕಾವಾಕ್ಯದಲ್ಲಿ 'ಭೇದಕಾಭಾವೇನ' ಎಂಬ ಪದದಿಂದ ಸಂಗತಿಗಳನ್ನು ಸ್ಪಷ್ಟಪಡಿಸಿದಂತೆ ಆಗುತ್ತದೆ. ಅದು ಹೇಗೆಂದರೆ ಪೂರ್ವಪಕ್ಷದಲ್ಲಿ ಜೀವನೇ ಬ್ರಹ್ಮನಾಗುವುದರಿಂದ ಹಿಂದಿನ ಸೂತ್ರದಲ್ಲಿ ಹೇಳಿದಂತೆ ವಿಷಯಾದಿಗಳು ಇಲ್ಲವಾಗುವುದರಿಂದ ಹಿಂದಿನ ಸೂತ್ರದಲ್ಲಿ ಹೇಳಿದ ಆ ಬ್ರಹ್ಮನ ಜಿಜ್ಞಾಸೆಯು ಮಾಡತಕ್ಕದ್ದಲ್ಲ ಎಂಬ ಆಕ್ಷೇಪ ಬರುವುದರಿಂದ ಇಲ್ಲಿ ಆಕ್ಷೇಪಿಕೀಸಂಗತಿ ಎಂದು ತಿಳಿಯಬೇಕು. ಇದನ್ನು 'ಪೂರ್ವಮಾಕ್ಷಿಪ್ಯತೇ ಯತ್ರ ತತ್ರ ಸಾಕ್ಷೇಪಿಕೀ ಮತಾ'(ಹಿಂದಿನ ಅಧಿಕರಣದ ಸಿದ್ಧಾಂತವನ್ನೇ ಆಕ್ಷೇಪಮಾಡಿಕೊಂಡು ಉತ್ತರಿಸುವುದನ್ನು ಆಕ್ಷೇಪಿಕೀಸಂಗತಿ ಎಂಬುದಾಗಿ ತಿಳಿಯಬೇಕು.) ಎಂಬ ಮಾತು ಸ್ಪಷ್ಟಪಡಿಸುತ್ತದೆ.

ವಿಶೇಷ ವಿಚಾರ - 'ತದ್‌ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬ ಶ್ರುತಿಯಲ್ಲಿರುವ 'ಬ್ರಹ್ಮ' ಪದಕ್ಕೆ ಗುಣಪೂರ್ಣತ್ವವೆಂದರ್ಥ. ಆದ್ದರಿಂದ ಬ್ರಹ್ಮನೇ ಜಿಜ್ಞಾಸ್ಯನೆಂದು ಜಿಜ್ಞಾಸಾಧಿಕರಣದಲ್ಲಿ ಹೇಳಲಾಗಿತ್ತು. ಆದರೆ ಎಲ್ಲಿಯ ತನಕ ಜೀವಬ್ರಹ್ಮಭೇದಕವಾದ ಧರ್ಮವನ್ನು ಹೇಳುವುದಿಲ್ಲವೋ, ಅಲ್ಲಿಯತನಕ ಶ್ರುತಿಯಲ್ಲಿರುವ ಬ್ರಹ್ಮಪದಕ್ಕೆ ಜೀವನೆಂಬ ರೂಢ್ಯರ್ಥ ಬಿಡಲು ಯಾವುದೇ ಬಾಧಕವಿರುವುದಿಲ್ಲ. ರೂಢ್ಯರ್ಥವನ್ನೇ ಇಟ್ಟುಕೊಳ್ಳಲು ಬರುವಾಗ ಗುಣಪೂರ್ಣತ್ವವೆಂಬ ಯೋಗಾರ್ಥವನ್ನು ಇಟ್ಟುಕೊಳ್ಳಲು ಬರುವುದಿಲ್ಲ. ಜಿಜ್ಞಾಸೆಗೆ ಉಪಯುಕ್ತವಾದ ಗುಣಪೂರ್ಣತ್ವವೇ ಯಾವಾಗ ಸಿದ್ಧವಾಗುವುದಿಲ್ಲವೋ ಆವಾಗ ಜಿಜ್ಞಾಸೆಯು ಕೂಡುವುದಿಲ್ಲವೆಂದು ಹಿಂದಿನ ಅಧಿಕರಣದಲ್ಲಿ ಹೇಳಿದ ವಿಷಯದ ಮೇಲೆ ಈ ಅಧಿಕರಣದಲ್ಲಿ ಪೂರ್ವಪಕ್ಷ ಮಾಡುತ್ತಿರುವುದರಿಂದ ಆಕ್ಷೇಪಿಕೀ ಸಂಗತಿಯೇ ಇದೆ.

ಸಂಗತಿಯು ಅಂತರ್ಭಾವ ಮತ್ತು ಆನಂತರ್ಯ ಎಂದು ಪ್ರಧಾನವಾಗಿ ಎರಡು ವಿಧವಾಗಿದೆ. ವೇದಾರ್ಥನಿರ್ಣಾಯಕವಾದ ನ್ಯಾಯಗ್ರಥನಾತ್ಮಕ 'ವಾಗಿರುವುದರಿಂದ ಈ ಸೂತ್ರಕ್ಕೆ ಶಾಸ್ತ್ರಾಂತರ್ಭಾವಸಂಗತಿಯಿದೆ. ಇನ್ನು ಅಧ್ಯಾಯಾಂತರ್ಭಾವಸಂಗತಿಯನ್ನಾಗಲೀ ಪಾದಾಂತರ್ಭಾವಸಂಗತಿಯನ್ನಾಗಲೀ ಈ ಅಧಿಕರಣಕ್ಕೆ ತೋರಿಸಬೇಕಾಗಿಲ್ಲ. ಅಧಿಕರಣದ ಆನಂತರ್ಯಸಂಗತಿಯನ್ನು ಆರು ಅಥವಾ ಏಳು ವಿಧದಲ್ಲಿ ವಿಭಾಗಿಸಲಾಗಿದೆ. ಅವುಗಳಲ್ಲಿ ಯಾವುದಾದರೊಂದರ ಸಂಗತಿಯನ್ನು ಹೇಳಿದರೆ ಮಾತ್ರ ಅಧಿಕರಣಕ್ಕೆ ಆನಂತರ್ಯಸಂಗತಿಯು ಕೂಡುತ್ತದೆ. ಪ್ರಕೃತ ತತ್ವಪ್ರಕಾಶಿಕಾದಲ್ಲಿ ಈ ಅಧಿಕರಣಕ್ಕೆ ಆಕ್ಷೇಪಿಕೀಸಂಗತಿಯನ್ನು ಹೇಳಿದ್ದಾರೆ. 'ಪೂರ್ವಮಾಕ್ಷಿಪ್ಯತೇ ಯತ್ರ ತತ್ರ ಆಕ್ಷೇಪಿಕೀ ಮತಾ' ಎಂಬಂತೆ ಪೂರ್ವಾಧಿ-

ಕರಣದ ವಿಷಯದ ಮೇಲೆ ಆಕ್ಷೇಪ ಮಾಡಿಕೊಂಡು ಉತ್ತರ ನೀಡಿರುವುದರಿಂದ ಆಕ್ಷೇಪಿಕೀಸಂಗತಿಯನ್ನು ತಿಳಿಯಬೇಕು. ಇದರಿಂದ ಗುಣಪೂರ್ಣತ್ವವು ಪ್ರಸಿದ್ಧವಾಗುವುದರಿಂದ ಬ್ರಹ್ಮನು ಜಿಜ್ಞಾಸ್ಯನೆಂದು ಸಿದ್ಧವಾಗುತ್ತದೆ. ಇದನ್ನು ಫಲವೆಂದು ತಿಳಿಯಬೇಕು.

ಶಂಕೆ - ಒಂದು ವೇಳೆ ಈ ಅಧಿಕರಣಕ್ಕೆ ಹಿಂದಿನ ಅಧಿಕರಣದಿಂದ ಆಕ್ಷೇಪಿಕೀಸಂಗತಿಯನ್ನು ಹೇಳುವುದಾದರೆ ಆವಾಗ ಸುಧಾವಿರೋಧ ಬರುತ್ತದೆ. ಏಕೆಂದರೆ ಸುಧೆಯಲ್ಲಿ ಆಕ್ಷೇಪಿಕೀ ಸಂಗತಿಯನ್ನು ಹೇಳದೆ ಬೇರೆ ಸಂಗತಿಯನ್ನು ಹೇಳಿದ್ದಾರಲ್ಲ?

ಸಮಾಧಾನ -ತತ್ವಪ್ರಕಾಶಿಕೆಯಲ್ಲಿ ಹೇಳಿದ ಸಂಗತಿ ಒಂದುರೀತಿ; ಸುಧೆಯಲ್ಲಿ ಹೇಳಿದ ಸಂಗತಿ ಮತ್ತೊಂದು ರೀತಿ. 'ಪ್ರಕಾರಾಂತರಸ್ಯ ಪ್ರಕಾರಾಂತರಾದೂಷಕತ್ವಾತ್ ನ ವಿರೋಧಃ' 'ಒಂದು ಬಗೆಯು ಮತ್ತೊಂದು ಬಗೆಯನ್ನು ದೂಷಿಸಲಾರದಾದ್ದರಿಂದ ವಿರೋಧವಿಲ್ಲ'.

ಬ್ರಹ್ಮಸ್ವರೂಪದ ವಿಚಾರ ಎಂದರೆ ಬ್ರಹ್ಮನ ಲಕ್ಷಣ ಹೇಳಿ, ಅನಂತರ ಅಂತಹ ಬ್ರಹ್ಮನ ಬಗ್ಗೆ ಪ್ರಮಾಣವನ್ನು ಹೇಳಬೇಕು. ಲಕ್ಷಣವನ್ನು ಹೇಳಿದರಷ್ಟೇ ಪ್ರಮಾಣದ ಆಕಾಂಕ್ಷೆ ಬರುತ್ತದೆ. ಆದ್ದರಿಂದ ಲಕ್ಷಣ ಪ್ರಮಾಣಗಳ ಮಧ್ಯದಲ್ಲಿ ಮೊದಲು ಲಕ್ಷಣವನ್ನು ಹೇಳಬೇಕು.ಅನಂತರ ಪ್ರಮಾಣವನ್ನು ಹೇಳಬೇಕು. ಈ ಸೂತ್ರದಲ್ಲಿ ವಿಶ್ವಕರ್ತೃತ್ವವೆಂಬ ಅಸಾಧಾರಣಲಕ್ಷಣವನ್ನು ಬ್ರಹ್ಮನಿಗೆ ಹೇಳಿರುವುದು ಸಂಗತವೇ ಆಗಿದೆ. ಈ ಕ್ರಮದಲ್ಲಿ ಸುಧೆಯು ಅಧಿಕರಣಸಂಗತಿಯನ್ನು ನಿರೂಪಿಸಿದೆ.

ಇದರಿಂದ ಪ್ರಪಂಚ್ಯಪ್ರಪಂಚಕಭಾವವೆಂಬ ಸಂಗತಿಯನ್ನು ಹೇಳಿದಂತಾಯಿತು. - ಮೊದಲನೆಯ ಸೂತ್ರದಲ್ಲಿ ಬ್ರಹ್ಮವಿಚಾರವನ್ನು ಮಾಡುತ್ತೇವೆಂದು ತಿಳಿಸಿದ್ದಾಯಿತು. ಅದರ ವಿವರಣೆಯನ್ನೇ 'ಜನ್ಮಾದ್ಯಸ್ಯ ಯತಃ' ಎಂಬ ಸೂತ್ರವು ಮಾಡುತ್ತಿದೆ. ಜನ್ಮಾಧಿ-ಕರಣವು ಪ್ರಪಂಚಕವಾಯಿತು ಜಿಜ್ಞಾಸಾಧಿಕರಣವು ಪ್ರಪಂಚ್ಯವಾಯಿತು. ಪ್ರಪಂಚಕ ಎಂದರೆ ವಿವರಿಸುವಂತಹದ್ದು. ಪ್ರಪಂಚ್ಯ ಎಂದರೆ ವಿವರಿಸಲ್ಪಡುವಂತಹದ್ದು ಎಂದರ್ಥ. ಅಥವಾ 'ಹೇತುಹೇತುಮದ್ಭಾವ' ಎಂಬ ಆನಂತರ್ಯಸಂಗತಿಯನ್ನು ಹೇಳಬಹುದು. ಪ್ರಥಮ ಸೂತ್ರದಲ್ಲಿ ವಿಷಯಾದಿಗಳನ್ನು ಮಂಡಿಸಿ ಬ್ರಹ್ಮವಿಚಾರವನ್ನು ಮಾಡಬೇಕೆಂದು ಹೇಳಿದ್ದಾರೆ. ವಿಷಯಾದಿಗಳು ಇಲ್ಲದೆ ಹೋದರೆ ಜನ್ಮಾದಿ ಅಧಿಕರಣಗಳು ಹೊರಟಿದ್ದೇ ವ್ಯರ್ಥವಾಗುತ್ತವೆ. ಆದ್ದರಿಂದ ಮುಂದಿನ ಈ ಜನ್ಮಾದಿ

ಅಧಿಕರಣಗಳಿಗೆ ಜಿಜ್ಞಾಸಾಧಿಕರಣವು ಹೇತುವಾಯಿತು. ಅದರ ಹೇತುಮತ್ = ಕಾರ್ಯ ಈ ಜನ್ಮಾದಿ ಅಧಿಕರಣಗಳು. ಹೀಗೆ ಆನಂತರ್ಯಕ್ಕೆ ಪ್ರಯೋಜಕವಾದ ಸಂಗತಿಯನ್ನು ಎರಡು ಪ್ರಕಾರದಲ್ಲಿ ತಿಳಿಯಬಹುದು. ಈ ಎರಡುವಿಧ ಸಂಗತಿಗಿಂತ ವಿಭಿನ್ನವಾದ ಆಕ್ಷೇಪಿಕೀಸಂಗತಿಯನ್ನು ತತ್ತ್ವಪ್ರಕಾಶಿಕೆಯಲ್ಲಿ ಹೇಳಿದ್ದಾರೆ. ತತ್ತ್ವಪ್ರಕಾಶಿಕೆಯಲ್ಲಿ ಹೇಳಿದ್ದೂ ತಪ್ಪಲ್ಲ. ಸುಧೆಯಲ್ಲಿ ಹೇಳಿದ್ದೂ ತಪ್ಪಲ್ಲ.

## ಶ್ರುತಿಸಂಗತಿಯೂ ಇದೆ

**भावदीपः –** एतेन 'तद् विजिज्ञासस्व' इत्युक्ता जिज्ञासा कार्येत्युक्तं पूर्वं तदसङ्गतम् । 'तद् ब्रह्म-इत्युक्तब्रह्मणोऽविष्णुत्वेन रूढ्या जीवत्वात्' इति पूर्वश्रुत्यात्र विचार्यश्रुतेरपि सङ्गतिः सिद्धा ।

ಇದರಿಂದಲೇ ಶ್ರುತಿಸಂಗತಿಯನ್ನು ತಿಳಿಯಬೇಕು. 'ತದ್ ವಿಜಿಜ್ಞಾಸಸ್ವ' ಎಂಬ ಶ್ರುತಿಯಲ್ಲಿ ಹೇಳಿದಂತೆ 'ಬ್ರಹ್ಮನ ಜಿಜ್ಞಾಸೆಯು ಮಾಡತಕ್ಕದ್ದು' ಎಂದು ಹಿಂದೆ ಹೇಳಿದ ಅಂಶವು ಸರಿಯಲ್ಲ. ಏಕೆಂದರೆ 'ತದ್ ಬ್ರಹ್ಮ' ಎಂಬ ವಾಕ್ಯದಲ್ಲಿ ಹೇಳಿದ ಬ್ರಹ್ಮನು ವಿಷ್ಣುವಲ್ಲ. ರೂಢಿಯಿಂದ ಆ ಬ್ರಹ್ಮಪದಕ್ಕೆ ಜೀವ ಎಂಬುದಾಗಿಯೇ ಅರ್ಥ ಎಂಬ ಆಕ್ಷೇಪಕ್ಕೆ ಉತ್ತರವಾಗಿ ಈ ಸೂತ್ರವಿರುವುದರಿಂದ ಹಿಂದಿನ ಅಧಿಕರಣದ ಶ್ರುತಿಯಿಂದ ಈ ಅಧಿಕರಣದಲ್ಲಿ ವಿಮರ್ಶೆ ಮಾಡುವ ಶ್ರುತಿಗೆ ಆಕ್ಷೇಪಿಕೀಸಂಗತಿ ಇದೆ ಎಂದು ತಿಳಿಯಬೇಕು.

## ಎರಡು ಅಧಿಕರಣಗಳ ವಿಷಯವಾಕ್ಯ ಒಂದೇ; ಆದರೂ ತಪ್ಪಿಲ್ಲ

**भावदीपः –** वाक्यैक्येपि पूर्वत्र 'तद् विजिज्ञासस्व' इत्यंशः 'तद् ब्रह्म' इति ब्रह्मश्रुतिरूपहेतूक्त्या विचारितः, अत्र तु पूर्वत्र हेतूकृत'तद् ब्रह्म' इत्यंशः, उत्तरत्र तु अत्र हेतूकृतो 'यतो वा' इत्यादि पूर्वांशो विचार्यत इत्यंशभेदाद् भेद इति भावः । 'इति'शब्दस्य 'इति सङ्गतिः' इति पूर्वेणान्वयः । एवमग्रेपि सङ्गतिग्रन्थव्याख्या ध्येया ।

ಹಿಂದಿನ ಸೂತ್ರ ಮತ್ತು ಈ ಸೂತ್ರಗಳಲ್ಲಿ ವಿಷಯವಾಕ್ಯ ಒಂದೇ ಆಗಿದ್ದರೂ ಹಿಂದಿನ ಸೂತ್ರದಲ್ಲಿ 'ತದ್ ವಿಜಿಜ್ಞಾಸಸ್ವ' ಎಂಬ ಅಂಶವು 'ತದ್ ಬ್ರಹ್ಮ' ಎಂಬ ಬ್ರಹ್ಮಶ್ರುತಿರೂಪವಾದ ಹೇತುವಾಕ್ಯದಿಂದ ವಿಮರ್ಶಿತವಾಗಿದೆ. ಈ ಸೂತ್ರದಲ್ಲಿ ಹಿಂದೆ ಹೇತುವಾಕ್ಯವಾಗಿದ್ದ 'ತದ್

ಬ್ರಹ್ಮ' ಎಂಬ ಅಂಶವು ಅನಂತರ ಇಲ್ಲಿ ಹೇತುವಾಗಿರುವ 'ಯತೋ ವಾ' ಇತ್ಯಾದಿ ಪೂರ್ವಾಂಶವು ವಿಮರ್ಶಿತವಾಗುತ್ತಿದೆ. ಹೀಗೆ ವಾಕ್ಯಗತವಾದ ಅಂಶಗಳ ಭೇದವಿರುವುದರಿಂದ ವಿಷಯವಾಕ್ಯಗಳು ಭಿನ್ನ ಎಂದು ತಿಳಿಯಬೇಕು. 'ಇತಿ'ಶಬ್ದಕ್ಕೆ ಸಂಗತಿಃ ಎಂಬುದಾಗಿ ಪೂರ್ವಶಬ್ದದೊಂದಿಗೆ ಅನ್ವಯವನ್ನು ಹೇಳಬೇಕು. ಇದೇ ರೀತಿಯಾಗಿ ಮುಂದೆಯೂ ಕೂಡ ಸಂಗತಿಗ್ರಂಥವನ್ನು ಅರ್ಥೈಸಿಕೊಳ್ಳಬೇಕು.

## ವಿಷಯವಾಕ್ಯದಲ್ಲಿ ಸುಧೆ ಟೀಕೆಗಳ ಅಭಿಪ್ರಾಯ

**भावदीपः – तच्छ्रुत्युक्तमिति** ।। 'न तु सुधायामिव सर्वश्रुत्युक्तं ब्रह्मपदार्थमात्रं जीव इति पूर्वपक्ष्यते' इति तच्छब्दप्रयोगाभिप्रायः । **उभयत्रापीति** ।। '' 'तदेव ब्रह्म' इति श्रुतौ विष्णौ 'बृहजातिजीव-कमलासनशब्दराशिषु' इति जीवे प्रयोगः'' इत्यर्थः । कारणत्वश्रवणात् जात्यादेरिहासन्देहनिविष्टत्वं व्यक्तम् । यद्वा तदप्युपलक्ष्यम् । **उत जीवादिरिति** ।। यथोक्तं न्यायविवरणटीकायाम् - 'जीव एवेति जात्यादेरुपलक्षणम् । एवशब्दस्तु भगवन्तं व्यावर्तयति' इति । **स्वकृतेति** ।। 'यतो नारायणप्रसादमृते' इत्यादिना स्वकृतेत्यर्थः । तथा चेतःपूर्वसूत्रे विष्णुत्वासाधनात् सन्देहो युक्त इति भावः ।

ಸುಧಾದಲ್ಲಿ 'ಸರ್ವಶ್ರುತಿಗಳಲ್ಲಿ ಹೇಳಿದ ಬ್ರಹ್ಮಪದದ ಅರ್ಥವು ಜೀವ' ಎಂಬುದಾಗಿ ಪೂರ್ವಪಕ್ಷವನ್ನು ಮಾಡಿದ್ದಾರೆ. ಇಲ್ಲಿ 'ತಚ್ಛ್ರುತ್ಯುಕ್ತಮ್' ಎಂಬುದಾಗಿ 'ತದ್‌ಬ್ರಹ್ಮ' ಎಂಬ ಶ್ರುತಿಯಲ್ಲಿ ಹೇಳಿದ ಬ್ರಹ್ಮಪದಕ್ಕೆ ಮಾತ್ರ 'ಜೀವ' ಎಂಬುದಾಗಿ ಪೂರ್ವಪಕ್ಷ ಮಾಡುತ್ತಿದ್ದಾರೆ. ಅದಕ್ಕಾಗಿಯೇ ತತ್‌ಶಬ್ದವನ್ನು ಪ್ರಯೋಗಮಾಡಿದ್ದಾರೆ. 'ತದೇವ ಬ್ರಹ್ಮ' ಎಂಬ ಶ್ರುತಿಯಲ್ಲಿ ಬ್ರಹ್ಮಶಬ್ದವು ವಿಷ್ಣು ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. 'ಬೃಹಜಾತಿಜೀವಕಮಲಾಸನ-ಶಬ್ದರಾಶಿಷು' ಎಂಬಲ್ಲಿ 'ಜೀವ' ಎಂಬರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ. ಇದನ್ನು 'ಉಭಯತ್ರಾಪಿ' ಎಂಬುದರಿಂದ ಹೇಳುತ್ತಿದ್ದಾರೆ. ಇಲ್ಲಿ ಕಾರಣತ್ವವನ್ನು ಹೇಳಿದ್ದರಿಂದ ಜಾತ್ಯಾದಿಗಳನ್ನು ಸಂದೇಹದಲ್ಲಿ ಸೇರಿಸಿಕೊಳ್ಳಬೇಕಾಗಿಲ್ಲ. ಅಥವಾ ಜಾತ್ಯಾದಿಗಳನ್ನೂ ಕೂಡ 'ಉತ ಜೀವಾದಿಃ' ಎಂಬುದಾಗಿ ಸಂದೇಹದಲ್ಲಿ ಸೇರಿಸಿಕೊಳ್ಳಬೇಕು. ಇದನ್ನು

ನ್ಯಾಯವಿವರಣಟೀಕೆಯಲ್ಲಿ 'ಜೀವ ಏವೇತಿ ಜಾತ್ಯಾದೇರುಪಲಕ್ಷಣಮ್ । ಏವಶಬ್ದಸ್ತು ಭಗವಂತಂ ವ್ಯಾವರ್ತಯತಿ' (ಜೀವ ಏವ ಎಂಬಲ್ಲಿ ಜಾತ್ಯಾದಿಗಳನ್ನೂ ಕೂಡ ಉಪಲಕ್ಷಣಯಾ ಸ್ವೀಕರಿಸಬೇಕು. ಏವಶಬ್ದದಿಂದ ಭಗವಂತನನ್ನು ಮಾತ್ರ ಬಿಡಬೇಕು) ಎಂಬುದಾಗಿ ಸ್ಪಷ್ಟಪಡಿಸಿದ್ದಾರೆ. 'ಸ್ವಕೃತ' ಎಂಬ ಶಬ್ದಕ್ಕೆ 'ಯತೋ ನಾರಾಯಣಪ್ರಸಾದಮೃತೇ' ಇತ್ಯಾದಿ ವಾಕ್ಯಗಳಿಂದ ಎಂದು ಅರ್ಥ. ಆದ್ದರಿಂದ ಈ ಹಿಂದಿನ ಸೂತ್ರದಲ್ಲಿ 'ಬ್ರಹ್ಮಶಬ್ದಕ್ಕೆ ವಿಷ್ಣು ಎಂಬುದಾಗಿ ಅರ್ಥ' ಎಂಬ ವಿಷಯವನ್ನು ಸಾಧಿಸದಿರುವುದರಿಂದ ಈ ಸಂಶಯವು ಯುಕ್ತವಾಗಿದೆ ಎಂದು ಅಭಿಪ್ರಾಯ.

ವಿಶೇಷ ವಿಚಾರ - ಪ್ರಶ್ನೆ:- 'ತದೇವ ಬ್ರಹ್ಮ' ಇತ್ಯಾದಿ ಕಡೆಯಲ್ಲಿರುವ ಬ್ರಹ್ಮಶಬ್ದವು ವಿಷ್ಣುಪರವಾದರೂ 'ತದ್ ವಿಜಿಜ್ಞಾಸಸ್ವ ತದ್‌ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವು ವಿಷ್ಣುಪರವಾಗುವುದಿಲ್ಲವೆಂದು ಚಂದ್ರಿಕೆಯಲ್ಲಿ ಹೇಳಿದೆ. ಆದರೆ ಸುಧೆಯಲ್ಲಿ ಸಮಸ್ತ ಶ್ರುತಿಗಳಲ್ಲಿ ಎಲ್ಲೆಲ್ಲಿ ಬ್ರಹ್ಮಶಬ್ದವಿದೆಯೋ ಆ ಎಲ್ಲಾ ಬ್ರಹ್ಮಶಬ್ದಗಳಿಂದಲೂ ವಿಷ್ಣುವು ವಾಚ್ಯನಲ್ಲವೆಂದು ಪೂರ್ವಪಕ್ಷ ಮಾಡಿಕೊಳ್ಳಲಾಗಿದೆ. ಆದ್ದರಿಂದ ಸುಧೆಗೂ ಚಂದ್ರಿಕೆಗೂ ವಿರೋಧ ಬಂತಲ್ಲವೇ?

ಉತ್ತರ : - ಸುಧೆಯಲ್ಲಿ ಹಾಗೆ ಹೇಳಿದ್ದರೂ ಟೀಕೆಯಲ್ಲಿ ಎಲ್ಲೆಡೆ ಬ್ರಹ್ಮಶಬ್ದವಾಚ್ಯತ್ವವನ್ನು ವಿಷ್ಣುವಿಗೆ ಒಪ್ಪಿ 'ತದ್‌ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದದಿಂದ ವಿಷ್ಣುವು ವಾಚ್ಯನಲ್ಲವೆಂದಷ್ಟೇ ಹೇಳಿದ್ದರಿಂದ ಸುಧೆಯ ವಿರೋಧವಿಲ್ಲ. ಅನೇಕಪ್ರಕಾರಗಳಲ್ಲಿ ಪೂರ್ವಪಕ್ಷ ಮಾಡಬಹುದು. ಸುಧೆಯಲ್ಲಿ ಮಾಡಿದ ಕ್ರಮವೇ ಬೇರೆ. ಟೀಕೆಯಲ್ಲಿ ಮಾಡಿದ ಕ್ರಮವೇ ಬೇರೆ. ಸುಧೆಯಲ್ಲಿ ಮಾಡಿದ ಪೂರ್ವಪಕ್ಷಕ್ರಮವನ್ನು ಚಂದ್ರಿಕೆಯಲ್ಲಿ ಇಟ್ಟುಕೊಂಡಿಲ್ಲ.

ಶಂಕೆ - ಕೆಲವು ಕಡೆ ಇರುವ ಬ್ರಹ್ಮಶಬ್ದವು ಯೋಗವೃತ್ತಿಯಿಂದ ವಿಷ್ಣುಪರವೆಂದು ಅಂಗೀಕರಿಸಿದರೆ ಶಾಖಾಂತರಾಧಿಕರಣನ್ಯಾಯದಿಂದ 'ತದ್‌ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವೂ ವಿಷ್ಣುಪರವೆಂದು ತಿಳಿಯುತ್ತದೆ.

ಸಮಾಧಾನ - ಶಾಖಾಂತರಾಧಿಕರಣನ್ಯಾಯವನ್ನು ಹೇಳಬೇಕಾದರೆ ಎರಡುಕಡೆಯೂ ಸಮಾನನ್ಯಾಯ ಇರಬೇಕು. ಉಳಿದೆಡೆ ಸಮುದ್ರಶಾಯಿತ್ವಾದಿ-ಲಿಂಗಗಳಿರುವುದರಿಂದ ವಿಷ್ಣುಪರತ್ವವು ಸಿದ್ಧವಾಗಿದೆ. ಆದರೆ ಅಂತಹ ಲಿಂಗಗಳು ಇಲ್ಲಿ

ಇಲ್ಲದಿರುವುದರಿಂದ ಶಾಖಾಂತರಾಧಿಕರಣನ್ಯಾಯವನ್ನು ಹೇಳಲಾಗದು. 'ತದ್‌ಬ್ರಹ್ಮ' ಎಂಬಲ್ಲಿನ ಬ್ರಹ್ಮಶಬ್ದವು ವಿಷ್ಣುಪರವಾಗದು.

## 'ಬ್ರಹ್ಮ'ಶಬ್ದಕ್ಕೆ ಯೌಗಿಕಾರ್ಥ ಸಿದ್ಧವಾಗಿಲ್ಲ

**भावदीपः** – यत् तु 'स विष्णुराह हि' इत्यादावेतत् पूर्वभाविसूत्रद्वये ब्रह्मशब्दस्य विष्णौ मुख्यत्वं सिद्धम् । अस्मिन्नपि शास्त्रे 'स्याच्चैकस्य ब्रह्मशब्दवत्' इत्यत्र द्वितीये, 'परं जैमिनिर्मुख्यत्वात्' इति चतुर्थे च मुख्यत्वं सूत्र एव सिद्धमिति । तन्न । योगेनैव तत्र मुख्यत्वस्याभिमतत्वात्। इह 'तद् ब्रह्म' इति श्रुतौ योगार्थस्यैव पूर्वपक्षिणाऽऽक्षेपात् । विष्णौ विद्वद्रूढिसत्त्वेपि इह तदभावाभ्युपगमेन केवलयौगिकत्वोपगमेनोत्तर-पक्षप्रवृत्तेः इति तात्पर्यात् । अभ्युपगमकृत्यं तु 'अभ्युपगम्योक्तिरियम्' इति टीकाव्याख्याने वक्ष्यामः ।

ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು – 'ಸ ವಿಷ್ಣುರಾಹ ಹಿ' ಇವೇ ಮೊದಲಾದ ಈ ಮೊದಲು ಬಂದ ಎರಡು ಸೂತ್ರಗಳಲ್ಲಿ ಬ್ರಹ್ಮಶಬ್ದಕ್ಕೆ ವಿಷ್ಣುವಿನಲ್ಲಿ ಮುಖ್ಯತ್ವವು ಸಿದ್ಧವಾಗಿದೆ. ಈ ಶಾಸ್ತ್ರದಲ್ಲಿಯೂ ಕೂಡ ಎರಡನೇ ಅಧ್ಯಾಯದಲ್ಲಿ 'ಸ್ಯಾತ್ ಚ ಏಕಸ್ಯ ಬ್ರಹ್ಮಶಬ್ದವತ್' ಎಂಬ ಸೂತ್ರದಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ 'ಪರಂ ಜೈಮಿನಿರ್ಮುಖ್ಯತ್ವಾತ್' ಎಂಬ ಸೂತ್ರದಲ್ಲಿ ಕೂಡ ಸೂತ್ರದಲ್ಲಿಯೇ ಮುಖ್ಯತ್ವವು ಸಿದ್ಧವಾಗಿದೆ – ಎಂಬುದಾಗಿ. ಇದು ಸರಿಯಲ್ಲ. ಈ ಸೂತ್ರಗಳಲ್ಲಿ ಯೋಗದಿಂದಲೇ ಮುಖ್ಯತ್ವವು ಅಭಿಪ್ರೇತವಾಗಿದೆ. ಇಲ್ಲಿ 'ತದ್ ಬ್ರಹ್ಮ' ಎಂಬ ಶ್ರುತಿಯಲ್ಲಿ ಯೋಗಾರ್ಥವನ್ನೇ ಪೂರ್ವಪಕ್ಷಿಗಳು ಆಕ್ಷೇಪಿಸುತ್ತಿದ್ದಾರೆ. ವಿಷ್ಣುವಿನಲ್ಲಿ ವಿದ್ವದ್‌ರೂಢಿ ಇದ್ದರೂ ಕೂಡ ಅದು ಇಲ್ಲ ಎಂಬುದಾಗಿ ಒಪ್ಪಿಕೊಂಡು, ಕೇವಲ ಯೌಗಿಕತ್ವವನ್ನು ಒಪ್ಪಿಕೊಳ್ಳುವುದರ ಮೂಲಕ ಉತ್ತರಪಕ್ಷವು ಪ್ರವೃತ್ತವಾಗಿದೆ. ಎಂದು ಅಭಿಪ್ರಾಯ. ಹೀಗೆ ಒಪ್ಪಿಕೊಳ್ಳುವುದಕ್ಕೆ ಪ್ರಯೋಜನವನ್ನು 'ಅಭ್ಯುಪಗಮ್ಯೋಕ್ತಿಃ' ಎಂಬ ಟೀಕಾವ್ಯಾಖ್ಯಾನದಲ್ಲಿ ವಿವರಿಸುತ್ತೇವೆ.

ಅಂಶದಿಂದ ದುರ್ಬಲಕ್ಕೆ ಪ್ರಬಲವಾದುದರಿಂದ ಬಾಧ ಎಂದರೆ 'ಅರ್ಥಾಂತರಪರತ್ವರೂಪವಾದ ಸಾವಕಾಶತ್ವವನ್ನು ಕಲ್ಪನೆ ಮಾಡುವುದು ಮತ್ತು ಪ್ರಬಲವಾದುದಕ್ಕೆ ವಾಕ್ಯದಲ್ಲಿ ಕಂಡಂತೆಯೇ ಅರ್ಥವನ್ನು ಹೇಳುವ ರೀತಿಯಲ್ಲಿ ನಿರವಕಾಶತ್ವವಿದೆ' ಎಂಬುದಾಗಿಯೇ ಹೇಳಬೇಕು. ಹೀಗೆ ಹೇಳದೆ ಅರ್ಥಾಂತರವನ್ನು ಕಲ್ಪನೆ ಮಾಡದೆ ಹೋದಾಗ ಪಾಶುಪತಾದಿಶಾಸ್ತ್ರಗಳಿಗೆ ವೇದದಿಂದ ಸಾವಕಾಶತ್ವವಿರುವುದರಿಂದ ಅಪ್ರಾಮಾಣ್ಯವು ಬಂದಂತೆ ಅಪ್ರಾಮಾಣ್ಯವು ಸಿದ್ಧಿಸಬೇಕಾದೀತು. ಏಕೆಂದರೆ ಸಾವಕಾಶತ್ವ ಮತ್ತು ಅಪ್ರಾಮಾಣ್ಯವನ್ನು ಹೊರತು ಪಡಿಸಿ ಬೇರೆ ರೀತಿಯ ಬಾಧವು ಇರುವುದಿಲ್ಲ - ಎಂದು ಅಭಿಪ್ರಾಯ.

ಒಟ್ಟು ಅಭಿಪ್ರಾಯ - ಉಪಕ್ರಮಾದಿಸಪ್ತವಿಧತಾತ್ಪರ್ಯಲಿಂಗಗಳಲ್ಲಿ ಹಿಂದಿನ ಲಿಂಗಗಳಿಗಿಂತ ಮುಂದಿನ ಲಿಂಗಗಳು ಪ್ರಬಲವಾಗಿರುತ್ತವೆ. ಆದರೆ ಎಲ್ಲೆಡೆ ಈ ನಿಯಮವಿಲ್ಲ. ಪ್ರಾಬಲ್ಯದೌರ್ಬಲ್ಯವಿಚಾರವನ್ನು ಸ್ಪಷ್ಟಪಡಿಸುವ ಒಂದು ಶ್ಲೋಕವಿದೆ -

ದ್ವಿವಿಧಂ ಬಲವತ್ವಂ ಹಿ ಬಹುತ್ವಾಚ್ಚ ಸ್ವಭಾವತಃ ।
ತಯೋಃ ಸ್ವಭಾವೋ ಬಲವಾನ್ ಉಪಜೀವ್ಯಾದಿಕಶ್ಚ ಸಃ ॥

ಲಿಂಗಗಳು ಬಹುಬಗೆಯಲ್ಲಿ ಬಲಿಷ್ಠ ಎನಿಸುತ್ತವೆ - ೧) ಬಾಹುಲ್ಯ ಪ್ರಯುಕ್ತವಾಗಿ ೨) ಸ್ವಭಾವ ಪ್ರಯುಕ್ತವಾಗಿ ೩) ಉಪಜೀವ್ಯ ಪ್ರಯುಕ್ತವಾಗಿ ೪) ನಿರವಕಾಶ ಪ್ರಯುಕ್ತವಾಗಿ ಎಂದು. ಇವುಗಳಲ್ಲಿ ನಿರವಕಾಶಪ್ರಯುಕ್ತವಾದ ಪ್ರಾಬಲ್ಯವೇ ಬಹಳ ಶ್ರೇಷ್ಠ.

ಉಪಸಂಹಾರಕ್ಕಿಂತ ಉಪಕ್ರಮವು ದುರ್ಬಲವಾಗಿದ್ದರೂ ನಿರವಕಾಶವಾಗಿದ್ದರೆ ಉಪಕ್ರಮವೇ ಶ್ರೇಷ್ಠವಾಗುತ್ತದೆ. ಇದರಂತೆ ಉಪಜೀವಕವು ಉಪಜೀವ್ಯಕ್ಕಿಂತ ದುರ್ಬಲವಾಗಿದ್ದರೂ ನಿರವಕಾಶವಾಗಿದ್ದರೆ ಶ್ರೇಷ್ಠವಾಗುತ್ತದೆ. ಒಂದು ಲಿಂಗವು ಅನೇಕಲಿಂಗಗಳಿಗಿಂತ ದುರ್ಬಲವಾಗಿದ್ದರೂ ನಿರವಕಾಶವಾಗಿದ್ದರೆ ಪ್ರಬಲವಾಗುತ್ತದೆ.

ಹಾಗಾದಲ್ಲಿ ನಿರವಕಾಶದಿಂದ ಸಾವಕಾಶವು ಬಾಧಿತವಾಗುತ್ತದೆಂದಷ್ಟೇ ಹೇಳಿರಿ; ಉಪಕ್ರಮಾದಿಗಳ ವಿಭಾಗವೇಕೆ? ಎಂದು ಪ್ರಶ್ನಿಸಬಾರದು. ಉಪಕ್ರಮ ಹಾಗು ಉಪಸಂಹಾರಗಳಲ್ಲಿ ಎರಡೂ ನಿರವಕಾಶಗಳಾಗದಿದ್ದಾಗ ಎರಡೂ ಸಾವಕಾಶಗಳಾಗುತ್ತವೆ. ಆವಾಗ ಸ್ವಭಾವಪ್ರಯುಕ್ತವಾಗಿಯೇ ಪ್ರಾಬಲ್ಯದೌರ್ಬಲವನ್ನು

ವಿಚಾರ ಮಾಡಬೇಕಾಗುತ್ತದೆ. ಆದ್ದರಿಂದ ಉಪಕ್ರಮಾದಿಗಳ ವಿಭಾಗವು ಸಾರ್ಥಕವಾಗಿದೆ. ಶ್ರುತಿಲಿಂಗಾದಿ-ತಾತ್ಪರ್ಯಲಿಂಗಗಳಲ್ಲಿಯೂ ನಿರವಕಾಶಲಿಂಗಕ್ಕೇ ಹೆಚ್ಚು ಸ್ಥಾನಮಾನ.

## ಸ್ವಭಾವತಃ ಪ್ರಬಲವಾದದ್ದಕ್ಕೆ ನಿರವಕಾಶತ್ವ ನಿಯಮವಿದೆಯೆ?

**भावदीपः – वाक्येति** ।। 'उपक्रमादिरूपावान्तरवाक्ये' इत्यर्थः । **अर्थान्तरेति** ।। 'बलाल्लक्षणादिनार्थान्तरकल्पनम्' इत्यर्थः । **स्वयमर्थान्तरेति** ।। 'स्वरसतोर्थान्तरवाचित्वम्' इत्यर्थः । एवं स्वभावदुर्बलस्योक्तरूपसावकाशत्वनियमाभाववत् स्वभावप्रबलस्य निरवकाशत्व-नियमाभावोप्यूह्यः' इति भावः ।

''ವಾಕ್ಯ'' ಎಂಬ ಪದದಿಂದ ಉಪಕ್ರಮಾದಿರೂಪವಾದ ಅವಾಂತರವಾಕ್ಯವನ್ನು ಗ್ರಹಿಸಬೇಕು. ''ಅರ್ಥಾಂತರ'' ಎಂಬ ಅಂಶದಿಂದ 'ಬಲಾತ್ಕಾರವಾಗಿ ಲಕ್ಷಣಾದಿಗಳಿಂದ ಅರ್ಥಾಂತರವನ್ನು ಕಲ್ಪನೆ ಮಾಡುವುದು' ಎಂದರ್ಥ. ''ಸ್ವಯಮರ್ಥಾಂತರ'' ಎಂಬ ಪದದಿಂದ 'ಸ್ವರಸವಾಗಿ ಅರ್ಥಾಂತರವನ್ನು ಹೇಳುವುದು' ಎಂದರ್ಥ. ಈ ರೀತಿಯಾಗಿ ಸ್ವಭಾವದುರ್ಬಲವಾದ ವಾಕ್ಯಕ್ಕೆ ಹಿಂದೆ ಹೇಳಿದ ಸಾವಕಾಶತ್ವನಿಯಮವು ಇಲ್ಲದೆ ಇರುವಂತೆ ಸ್ವಭಾವಪ್ರಬಲವಾದ ವಾಕ್ಯಕ್ಕೆ ನಿರವಕಾಶತ್ವನಿಯಮವು ಇಲ್ಲ ಎಂಬುದಾಗಿ ಊಹಿಸಿಕೊಳ್ಳಬೇಕು.

## ಶ್ರುತಿಲಿಂಗಾದಿಗಳನ್ನು ವಿವಕ್ಷಿಸಬೇಕೆ?

**भावदीपः –** नन्वग्रे 'तल्लिङ्गात्' इत्यादौ श्रुतिलिङ्गवाक्यप्रकरणस्थान समाख्याभिरपि निर्णयो दृश्यत इति कथं भाष्ये सप्तानामेवोक्तिः? इत्यत आह – **अत्रेति** ।। 'तात्पर्यार्थनिर्णये:' इत्यर्थः । 'उपपत्त्यादिलिङ्गमिति भाष्ये' इति वार्थः । श्रुत्यादीनां लक्षणबलाबलबीजादिकं 'तु शब्दादेव' इत्यत्र वक्ष्याम इति भावः ।

ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು - ಮುಂದೆ 'ತಲ್ಲಿಂಗಾತ್' ಇತ್ಯಾದಿ ಕಡೆಗಳಲ್ಲಿ ಶ್ರುತಿ, ಲಿಂಗ, ವಾಕ್ಯ , ಪ್ರಕರಣ, ಸ್ಥಾನ, ಸಮಾಖ್ಯಾ ಇವುಗಳಿಂದಲೂ ಕೂಡ ನಿರ್ಣಯವನ್ನು ಮಾಡುವುದು ಕಂಡಿದೆ. ಆದ್ದರಿಂದ ಭಾಷ್ಯದಲ್ಲಿ ಉಪಕ್ರಮಾದಿ ಏಳನ್ನು ಮಾತ್ರ ಹೇಗೆ ಹೇಳಿದರು? ಇದಕ್ಕೆ ಉತ್ತರವಾಗಿ ''ಅತ್ರ'' ಇತ್ಯಾದಿ ವಾಕ್ಯ ಹೊರಟಿದೆ. ಇಲ್ಲಿ ಅತ್ರ ಎಂಬ ಪದಕ್ಕೆ 'ತಾತ್ಪರ್ಯಾರ್ಥನಿರ್ಣಯದಲ್ಲಿ' ಎಂದು ಅರ್ಥ. ಅಥವಾ 'ಉಪಪತ್ತ್ಯಾದಿಲಿಂಗಮ್ ಎಂಬ ಭಾಷ್ಯದಲ್ಲಿ' ಎಂದು ಅರ್ಥ. ಶ್ರುತಿಲಿಂಗಾದಿಗಳಿಗೆ ಲಕ್ಷಣವನ್ನು ಮತ್ತು ಬಲಾಬಲಗಳನ್ನು ಇದೇ ಸೂತ್ರದಲ್ಲಿ ಮುಂದೆ 'ತು ಶಬ್ದಾದೇವ' ಎಂಬಲ್ಲಿ ಹೇಳಲಿದ್ದೇವೆ ಎಂಬ ಅಭಿಪ್ರಾಯವನ್ನು ಗ್ರಹಿಸಬೇಕು.

## ನ್ಯಾಯವಿವರಣದಲ್ಲಿ ಸಮನ್ವಯಶಬ್ದಾರ್ಥ

**ಭಾವದೀಪಃ – ननु ''प्रतीत्यादेरज्ञानमूलत्वादिपरिकल्प्यान्येषां कारणतया शास्त्रयोनित्वाग्रहणे को हेतुरिति कृतप्रश्नस्य कथमनेनोत्तरं लब्धम्? इत्यतः सौत्रसमन्वयादित्येतत्तात्पर्योक्तिपरस्य 'उपक्रमादिलक्षणः समन्वय एव शास्त्रप्रतिपाद्यत्वे कारणम्' इति न्यायविवरणस्यार्थमाह – पाशुपतेति ।। प्रतीतमपि आपातप्रतीतमपि इत्यर्थः । पाशुपताद्युक्त्यादेरिति ।। 'पाशुपतादावुक्तेरापातप्रतीतिश्च' इत्यर्थः ।**

ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು - ಪ್ರತೀತ್ಯಾದಿಗಳಿಗೆ ಅಜ್ಞಾನಮೂಲತ್ವಾದಿಗಳನ್ನು ಕಲ್ಪಿಸಿಕೊಂಡು, ವಿಷ್ಣುವನ್ನು ಬಿಟ್ಟು ಉಳಿದವರಿಗೆ ಕಾರಣತಯಾ ಶಾಸ್ತ್ರಯೋನಿತ್ವವನ್ನು ಸ್ವೀಕಾರ ಮಾಡದೇ ಇರುವುದಕ್ಕೆ ಏನು ಕಾರಣ? ಎಂಬುದಾಗಿ ಪ್ರಶ್ನೆ ಮಾಡಿದ ವ್ಯಕ್ತಿಗೆ ನಿಮ್ಮ ಈ ವ್ಯಾಖ್ಯಾನದಿಂದ ಏನು ಉತ್ತರ ಸಿಕ್ಕಿತು? ಇದಕ್ಕೆ ಉತ್ತರವಾಗಿ ಸೂತ್ರದಲ್ಲಿರುವ 'ಸಮನ್ವಯಾತ್' ಎಂಬ ಶಬ್ದವು 'ಉಪಕ್ರಮಾದಿತಾತ್ಪರ್ಯಲಿಂಗಗಳನ್ನು ಹೇಳುವುದರಿಂದ ಈ ರೀತಿಯಾದ ಸಮನ್ವಯವೇ ಶಾಸ್ತ್ರಪ್ರತಿಪಾದ್ಯತ್ವಕ್ಕೆ ಕಾರಣ' ಎಂಬ ನ್ಯಾಯವಿವರಣದ ಅಂಶವನ್ನು ''ಪಾಶುಪತ'' ಇತ್ಯಾದಿ ವಾಕ್ಯದಿಂದ ವಿವರಣೆಯನ್ನು ನೀಡುತ್ತಿದ್ದಾರೆ. ಈ ವಾಕ್ಯದಲ್ಲಿ 'ಪ್ರತೀತಮಪಿ' ಎಂಬ ಪದಕ್ಕೆ 'ಆಪಾತತಃ ಕಂಡು ಬಂದಿದ್ದರೂ' ಎಂದು ಅರ್ಥ.

''ಪಾಶುಪತಾದ್ಯುಕ್ತ್ಯಾದೇಃ'' ಎಂಬಲ್ಲಿ 'ಪಾಶುಪತಾದಿ ಶಾಸ್ತ್ರಗಳಲ್ಲಿ ಹೇಳಿರುವುದರಿಂದ ಮತ್ತು ವೇದಗಳಲ್ಲಿ ಆಪಾತತಃ ಪ್ರತೀತಿ ಇರುವುದರಿಂದ' ಎಂಬ ಅರ್ಥವನ್ನು ಗ್ರಹಿಸಿಕೊಳ್ಳಬೇಕು.

## ನ್ಯಾಯವಿವರಣವನ್ನು ಸೇರಿಸಿಕೊಂಡು ಭಾಷ್ಯವ್ಯಾಖ್ಯಾನ

**भावदीपः – एवं सौत्रसमन्वयशब्दार्थोक्तिपरन्यायविवरणार्थमुक्त्वा, 'ततश्च किम्?' इत्यतः तदन्वितत्वेन भाष्यार्थमाह – तैश्चेति ।। 'शास्त्र' इति भाष्ये शेष इति भावः । ब्रह्मैवेति ।। एतेन सूत्रे तुरवधारणे तदिति च ब्रह्म परामृश्यते । शास्त्रयोनीति पूर्वस्मात् प्रथमान्तं सदनुवर्तते इति दर्शितम् । शास्त्रस्य - ऋग्यजुः सामेत्युक्तऋगादिरूपशास्त्रस्य विविधरूत्वेन कल्पनम् = विकल्पः ।**

ಈ ರೀತಿಯಾಗಿ ಸೂತ್ರದಲ್ಲಿರುವ ಸಮನ್ವಯಶಬ್ದದ ಅರ್ಥವನ್ನು ತಿಳಿಸುವ ನ್ಯಾಯವಿವರಣಕ್ಕೆ ಅರ್ಥವನ್ನು ಹೇಳಿ ಮುಂದೇನು? ಎಂಬ ಪ್ರಶ್ನೆಗೆ ಉತ್ತರವಾಗಿ ಆ ನ್ಯಾಯವಿವರಣದ ಅಭಿಪ್ರಾಯವನ್ನೂ ಸೇರಿಸಿಕೊಂಡು ''ತೈಶ್ಚ'' ಇತ್ಯಾದಿ ವಾಕ್ಯದಿಂದ ಭಾಷ್ಯದ ಅರ್ಥವನ್ನು ಹೇಳುತ್ತಿದ್ದಾರೆ. ಈ ವಾಕ್ಯದಲ್ಲಿ 'ಶಾಸ್ತ್ರೇ' ಎಂಬ ಪದವನ್ನು ಹೇಳಿರುವುದರಿಂದ ಈ ಪದವನ್ನು ಭಾಷ್ಯದಲ್ಲಿ ಶೇಷಪೂರಣೆ ಮಾಡಿಕೊಳ್ಳಬೇಕು ಎಂದು ಗ್ರಹಿಸಬೇಕು. ''ಬ್ರಹ್ಮೈವ'' ಎಂಬ ಪದದಿಂದ ಸೂತ್ರದಲ್ಲಿ ಹೇಳಿದ 'ತು'ಶಬ್ದವು ಅವಧಾರಣ ಎಂಬರ್ಥವನ್ನು ಹೊಂದಿದ್ದು, ತತ್ ಎಂಬ ಶಬ್ದದಿಂದ ಬ್ರಹ್ಮನನ್ನು ಸ್ವೀಕರಿಸಬೇಕು. ಹಿಂದಿನ ಸೂತ್ರದಿಂದ ಶಾಸ್ತ್ರಯೋನಿ ಎಂಬುದಾಗಿ ಪ್ರಥಮಾಂತವಾದ ಶಬ್ದವು ಅನುವೃತ್ತಿಯಾಗುತ್ತದೆ ಎಂಬುದನ್ನು ತೋರಿಸಿದಂತೆ ಆಯಿತು.

''ಶಾಸ್ತ್ರಸ್ಯ'' ಎಂಬ ಪದಕ್ಕೆ ಋಗ್ಯಜುಃಸಾಮ ಇತ್ಯಾದಿಗಳಿಂದ ಉಕ್ತವಾದ ಋಗಾದಿರೂಪವಾದ ಶಾಸ್ತ್ರಕ್ಕೆ ಎಂದು ಅರ್ಥ. ''ವಿಕಲ್ಪ'' ಎಂಬ ಶಬ್ದಕ್ಕೆ ವಿವಿಧರೂಪವುಳ್ಳವನನ್ನಾಗಿ ಕಲ್ಪಿಸುವುದು ಎಂದರ್ಥ.

ವಿಶೇಷ ವಿಚಾರ - ಉಪಕ್ರಮಾದಿಗಳು ಏಳೇ ತಾತ್ಪರ್ಯಲಿಂಗಗಳೆಂದು ಇಲ್ಲಿ ಹೇಳಿ, ಮುಂದೆ ಶ್ರುತ್ಯಾದಿಗಳನ್ನೂ ತಾತ್ಪರ್ಯಲಿಂಗಗಳೆಂದು ಹೇಗೆ ಹೇಳುತ್ತೀರಿ 'ಎಂಬ ಶಂಕೆಗೆ 'ಅತ್ರ 'ಎಂಬ ಟೀಕೆಯಿಂದ ಉತ್ತರ ನೀಡುತ್ತಿದ್ದಾರೆ. ''ಉಪಪತ್ಯಾದಿ'' ಎಂಬಲ್ಲಿರುವ ಆದಿ ಪದದಿಂದ ಶ್ರುತಿ ಪ್ರಕರಣ, ಸ್ಥಾನ, ಸಮಾಖ್ಯ ಮೊದಲಾದ ಆರು ಪ್ರಮಾಣಗಳನ್ನು ಗ್ರಹಣ ಮಾಡಬೇಕೆಂದು ತಿಳಿಯಬೇಕು. ಈ ಶ್ರುತ್ಯಾದಿಗಳ ಸ್ವರೂಪವನ್ನು ಮುಂದೆ ವಾಮನಾಧಿಕರಣದಲ್ಲಿ ವಿವರಣೆ ಮಾಡುತ್ತಾರೆ.

ಉಪಕ್ರಮಾದಿಗಳಿಂದ ರುದ್ರಾದಿಗಳೂ ಕೂಡ ಶಾಸ್ತ್ರದಿಂದ ಪ್ರತಿಪಾದ್ಯರಾಗಿದ್ದಾರೆಂದು ನಿರ್ಣಯ ಮಾಡಬಹುದಲ್ಲವೆ ? ಎಂಬ ಪ್ರಶ್ನೆಗೆ ''ತೈಶ್ಚ ಸಮ್ಯಕ್ ಶಾಸ್ತ್ರೇ'' ಎಂಬ ವಾಕ್ಯದಿಂದ ಉತ್ತರ ಕೊಟ್ಟಿದ್ದಾರೆ.

## ಎಲ್ಲವೂ ಹರಿಪರ

**भावदीपः – चत्वारि वागिति ।।** तत्र वागित्यनुवादः ।

'विधिभागे हरेः पूजैवाभिधाने च तद्गुणाः ।
विकल्पे तद् बहुत्वं चाप्यपोहे तु तदप्रियम् ।
उच्यते सर्ववेदेषु तच्च वेद स एव हि ।
सुरा हरेर्गुणाः प्रोक्तास्ते मे स्युरिति चिन्तनम् ।
सुरापानमिति प्रोक्तं तन्न कुर्यात् कथञ्चन ।
ब्राह्मणो विष्णुरुद्दिष्टः स नास्तीत्यभिचिन्तनम् ।
ब्रह्महत्या समुद्दिष्टा तां न कुर्यात् कथञ्चन ।
इत्याद्यपोहवाक्यार्थश्चिन्त्यो विष्णौ बुधैर्जनैः ।।'

इत्येकादशस्कन्धतात्पर्यदिशाऽर्थमाह – **कर्मेति ।।**

'ಚತ್ವಾರಿವಾಕ್' ಇತ್ಯಾದಿ ಪದಗಳಲ್ಲಿ 'ವಾಕ್' ಎಂಬ ಪದದಿಂದ ಆ ರೂಪವುಳ್ಳ ಭಗವಂತನನ್ನು ಅನುವಾದ ಮಾಡಿ ಅವನ ರೂಪಗಳನ್ನು ಚಿಂತಿಸುತ್ತಿದ್ದಾರೆ.

ವಿಧಿಭಾಗೇ ಹರೇಃ ಪೂಜೈವಾಭಿಧಾನೇ ಚ ತದ್ಗುಣಾಃ।
ವಿಕಲ್ಪೇ ತದ್ಬಹುತ್ವಂ ಚಾಪ್ಯಪೋಹೇ ತು ತದಪ್ರಿಯಮ್।
ಉಚ್ಯತೇ ಸರ್ವವೇದೇಷು ತಚ್ಚ ವೇದ ಸ ಏವ ಹಿ।

ಎಲ್ಲಾ ವೇದಗಳಲ್ಲಿ ವಿಧಿಯನ್ನು ತಿಳಿಸುವ ಭಾಗದಿಂದ ಹರಿಯ ಪೂಜೆಯನ್ನು ಮಾಡಬೇಕು ಇತ್ಯಾದಿಯಾಗಿ ಹರಿಯನ್ನೇ ಚಿಂತಿಸುತ್ತಾರೆ. ಇಂದ್ರಾದಿಶಬ್ದಗಳಿಂದ ಭಗವಂತನನ್ನು ಹೇಳಿದರೆ ಆ ಶಬ್ದಗಳಿಗೆ ಪ್ರವೃತ್ತಿನಿಮಿತ್ತವಾದ ಗುಣಗಳು ಭಗವಂತನಲ್ಲಿ ಇವೆ ಎಂದು ಅರ್ಥ. ಸಂಖ್ಯೆಗಳಿಂದ ವಿಕಲ್ಪ ಮಾಡಿದಾಗ ಭಗವಂತನಿಗೆ ಬಹುರೂಪಗಳು ಇವೆ ಎಂದು ಚಿಂತಿಸಬೇಕು. 'ಸುರಾಪಾನಾದಿಗಳನ್ನು ಮಾಡಬಾರದು' ಎಂಬ ರೀತಿಯಾಗಿ ಅಪೋಹ ಮಾಡಿದಾಗ ಇದು ಭಗವಂತನಿಗೆ ಪ್ರಿಯವಾದುದಲ್ಲ ಎಂದು ಚಿಂತಿಸಬೇಕು. ಹೀಗೆ ವೇದಗಳಲ್ಲಿ ಕಂಡುಬಂದಿರುವ ಎಲ್ಲಾ ವಿಷಯಗಳೂ ಕೂಡ ಭಗವಂತನನ್ನೇ ಹೇಳುತ್ತವೆ. ಇದನ್ನು ಅವನೊಬ್ಬನೇ ಸರಿಯಾಗಿ ತಿಳಿದಿದ್ದಾನೆ.

ಸುರಾ ಹರೇರ್ಗುಣಾಃ ಪ್ರೋಕ್ತಾಸ್ತೇ ಮೇ ಸ್ಯುರಿತಿ ಚಿಂತನಮ್ ।
ಸುರಾಪಾನಮಿತಿಪ್ರೋಕ್ತಂ ತನ್ನ ಕುರ್ಯಾತ್ ಕಥಂಚನ ॥

'ನ ಸುರಾಂ ಪಿಬೇತ್' ಎಂಬ ಅಪೋಹವಾಕ್ಯದಲ್ಲಿ ಸುರಾಶಬ್ದಕ್ಕೆ ಭಗವಂತನ ಗುಣಗಳು ಎಂದು ಅರ್ಥ. ಆ ಗುಣಗಳು ನನ್ನಲ್ಲಿವೆ ಎಂದು ತಿಳಿದುಕೊಳ್ಳುವುದೇ ಸುರಾಪಾನ ಎಂಬುದಾಗಿ ಕರೆದಿದ್ದಾರೆ. ಈ ರೀತಿಯಾದ ಸುರಾಪಾನವನ್ನು ಯಾವ ಬಗೆಯಲ್ಲಿಯೂ ಮಾಡಬಾರದು.

ಬ್ರಾಹ್ಮಣೋ ವಿಷ್ಣುರುದ್ದಿಷ್ಟಃ ಸ ನಾಸ್ತೀತ್ಯಭಿಚಿಂತನಮ್ ।
ಬ್ರಹ್ಮಹತ್ಯಾ ಸಮುದ್ದಿಷ್ಟಾ ತಾಂ ನ ಕುರ್ಯಾತ್ ಕಥಂಚ ॥

'ಬ್ರಾಹ್ಮಣೋ ನ ಹಂತವ್ಯಃ' ಇತ್ಯಾದಿ ಅಪೋಹವಾಕ್ಯದಲ್ಲಿ ಬ್ರಾಹ್ಮಣ ಎಂಬ ಶಬ್ದದಿಂದ ವಿಷ್ಣುವನ್ನು ಹೇಳುತ್ತಿದ್ದಾರೆ. ಅವನು ಇಲ್ಲ ಎಂದು ಚಿಂತಿಸುವುದನ್ನು 'ಬ್ರಹ್ಮಹತ್ಯಾ' ಎಂಬ ಪದದಿಂದ ಕರೆಯುತ್ತಿದ್ದು, ಈ ಬ್ರಹ್ಮಹತ್ಯೆಯನ್ನು ಯಾವ ಬಗೆಯಲ್ಲಿಯೂ ಮಾಡಬಾರದು. ಇವೇ ಮೊದಲಾದ ಅಪೋಹವಾಕ್ಯಗಳ ಅರ್ಥವನ್ನು ಪಂಡಿತಜನರು ವಿಷ್ಣುವಿನಲ್ಲೇ ಚಿಂತಿಸಬೇಕು. ಈ ರೀತಿಯಾಗಿ ಏಕಾದಶಸ್ಕಂಧತಾತ್ಪರ್ಯದಲ್ಲಿ ತಿಳಿಸಿದಂತೆ ''ಕರ್ಮ'' ಇತ್ಯಾದಿ ವಾಕ್ಯಗಳಿಂದ ಅರ್ಥವನ್ನು ಸ್ಪಷ್ಟಪಡಿಸುತ್ತಿದ್ದಾರೆ.

## ಕರ್ಮಕಾಂಡವೂ ಹರಿಪರ

**भावदीपः** – 'अस्याः' इत्यग्रे श्रवणादाह – श्रुतिरिति ।। मां प्रत्येवेति ।। 'तेषां दुःखप्रहाणाय श्रुतिरेषा प्रवर्तत' इत्युक्तेर्निःशेषदुःख-

प्रहाणरूपमोक्षस्य 'प्रीत्या मोक्षफलत्वाच्च' इत्यनुव्याख्यानोक्तदिशा विष्णुप्रीतिं विनाऽयोगात् जीवानां तादृङ्मोक्षहेतुविष्णुप्रीत्युद्देशेन विधत्ते । अवान्तरतात्पर्येण कर्मविदधदपि कर्मकाण्डं महातात्पर्येण मय्येव पर्यवस्यतीति भावः । वक्ष्यति च 'वाक्यान्वयात्' इत्यत्र । **अभिधत्त इति।।** 'रूढियोगादिवृत्तिभिरिन्द्राद्यभिधात्री श्रुतिर्महायोगविद्वद्रूढिभ्यां मामेवाभिधत्ते' इत्यर्थः । तदपि वाक्यान्वयमुपेत्यैव अप्रियादप्रीतेरपोह्यः अप्रीतिमान्न कार्यः । 'अप्रीतिहेतुत्वात् सुरापानं न कार्यमिति वक्ति' इत्यर्थः । 'इत्यस्याः' इत्येतद् व्याख्यानम् – **एवम्भूतायाः इति** । 'कर्मादिविधात्र्यादिरूपायाः' इत्यर्थः । 'इत्यहम्' इत्यत्र 'इति'शब्दस्य 'हृदयम्' इत्यनेनान्वयमाह – **इत्यभिप्रायमिति ।।**

''ಅಸ್ಯಾಃ'' ಎಂಬ ಪದವು ಮುಂದೆ ಕೇಳಿಬರುವುದರಿಂದ ಅದರ ಅರ್ಥವನ್ನು 'ಶ್ರುತಿಃ' ಎಂಬುದಾಗಿ ವಿವರಿಸಿದ್ದಾರೆ. ''ಮಾಂ ಪ್ರತ್ಯೇವ'' ಎಂಬ ಅಂಶದಿಂದ 'ತೇಷಾಂ ದುಃಖಪ್ರಹಾಣಾಯ ಶ್ರುತಿರೇಷಾ ಪ್ರವರ್ತತೇ' (ಸಂಸಾರದಲ್ಲಿ ಕಷ್ಟಪಡುತ್ತಿರುವ ಜೀವಿಗಳ ದುಃಖವನ್ನು ಪರಿಹಾರ ಮಾಡುವುದಕ್ಕಾಗಿ ಶ್ರುತಿಯು ಪ್ರವೃತ್ತವಾಗಿದೆ) ಎಂಬ ವಾಕ್ಯದಂತೆ ಎಲ್ಲಾ ದುಃಖಗಳ ಪರಿಹಾರರೂಪವಾದ ಮೋಕ್ಷಕ್ಕೆ ''ಪ್ರೀತ್ಯಾ ಮೋಕ್ಷಫಲತ್ವಾಚ್ಚ'' ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಹೇಳಿರುವಂತೆ ಭಗವತ್ಪ್ರೀತಿಯನ್ನು ಬಿಟ್ಟು ಬೇರೆ ದಾರಿ ಇಲ್ಲದಿರುವುದರಿಂದ ಜೀವಿಗಳಿಗೆ ಆ ರೀತಿಯಾದ ಮೋಕ್ಷಕ್ಕೆ ಕಾರಣವಾದ ಭಗವಂತನ ಪ್ರೀತಿಯನ್ನು ಉದ್ದೇಶವಾಗಿ ಇಟ್ಟುಕೊಂಡು ಕರ್ಮಾದಿಗಳನ್ನು ವಿಧಾನ ಮಾಡುತ್ತಿವೆ. ಕರ್ಮಕಾಂಡವು ಅವಾಂತರ-ತಾತ್ಪರ್ಯದಿಂದ ಕರ್ಮವನ್ನು ಹೇಳುತ್ತಿದ್ದರೂ ಮಹಾತಾತ್ಪರ್ಯದಿಂದ ಭಗವಂತನಲ್ಲೇ ಪರ್ಯವಸಾನವನ್ನು ಹೊಂದುತ್ತದೆ'' ಎಂಬ ಅಭಿಪ್ರಾಯವನ್ನು ಗ್ರಹಿಸಿಕೊಳ್ಳಬೇಕು. ಈ ಅಭಿಪ್ರಾಯವನ್ನು ''ವಾಕ್ಯಾನ್ವಯಾತ್'' ಎಂಬಲ್ಲಿ ಸ್ಪಷ್ಟಪಡಿಸಲಿದ್ದಾರೆ.

''ಅಭಿಧತ್ತೇ'' ಎಂಬ ಅಂಶಕ್ಕೆ 'ರೂಢಿಯೋಗಾದಿ ವೃತ್ತಿಗಳಿಂದ ಇಂದ್ರಾದಿಗಳನ್ನು ಶ್ರುತಿಯು ಹೇಳುತ್ತಿದ್ದರೂ ಮಹಾಯೋಗವಿದ್ವದ್‌ರೂಢಿಗಳಿಂದ ನನ್ನನ್ನೇ ಶ್ರುತಿಯು

ಹೇಳುತ್ತಿದೆ' ಎಂಬುದಾಗಿ ಅರ್ಥ. ಅದೂ ಕೂಡ ವಾಕ್ಯಾನ್ವಯವನ್ನು ಹೊಂದಿಸಿಕೊಂಡೇ ನನ್ನನ್ನು ಹೇಳುತ್ತಿದೆ. 'ಅಪ್ರಿಯಾತ್' ಎಂಬ ಶಬ್ದಕ್ಕೆ 'ಅಪ್ರೀತೇಃ' ಎಂಬುದಾಗಿ ಅರ್ಥ. ಹಾಗಾಗಿ 'ಅಪೋಹ್ಯಃ' ಎಂದರೆ ಅದು ಅಪ್ರಿಯವಾದದ್ದು ಎಂಬ ಅರ್ಥವಿದ್ದು, ಅದನ್ನು ಮಾಡಬಾರದು ಎಂಬ ಅರ್ಥವನ್ನು ಹೊಂದಿಸಿಕೊಳ್ಳಬೇಕು. ಅಂದರೆ ಭಗವಂತನ ಅಪ್ರೀತಿಗೆ ಕಾರಣವಾದುದರಿಂದ ಸುರಾಪಾನವನ್ನು ಮಾಡಬಾರದು ಎಂಬ ಅಭಿಪ್ರಾಯವನ್ನು ಶ್ರುತಿಯು ಹೇಳುತ್ತಿದೆ.

''ಇತ್ಯಸ್ಯಾಃ'' ಎಂಬ ಪದಕ್ಕೆ 'ಏವಂಭೂತಾಯಾಃ' ಎಂಬುದಾಗಿ ವ್ಯಾಖ್ಯಾನ ಮಾಡಿದ್ದಾರೆ. ಹೀಗೆ ಈ ಪದಕ್ಕೆ 'ಕರ್ಮಾದಿಗಳನ್ನು ವಿಧಾನ ಮಾಡುವುದೇ ಸ್ವರೂಪವಾಗಿ ಉಳ್ಳ ಶ್ರುತಿಗೆ' ಎಂಬುದಾಗಿ ಅರ್ಥ. 'ಇತ್ಯಹಂ' ಎಂಬಲ್ಲಿ ಇರುವ ಇತಿಶಬ್ದಕ್ಕೆ ಹೃದಯಂ ಎಂಬ ಶಬ್ದದಿಂದ ಅನ್ವಯವನ್ನು ಮಾಡಿಕೊಂಡು 'ಇತ್ಯಭಿಪ್ರಾಯಮ್' ಎಂಬುದಾಗಿ ಹೇಳಿದ್ದಾರೆ.

ವಿಶೇಷ ವಿಚಾರ -''ಕರ್ಮವಿಧಾತ್ರೀ'' ಎಂದರೆ ''ಪ್ರಾತ ಸಂಧ್ಯಾಮುಪಾಸೀತ'' ಇವೇ ಮೊದಲಾದ ಕರ್ಮಗಳನ್ನು ವಿಧಾನಮಾಡುವ ವಾಕ್ಯಗಳು ಎಂದರ್ಥ. ಈ ಕರ್ಮಗಳನ್ನು ವಿಧಾನ ಮಾಡುವ ಈ ವಾಕ್ಯಗಳು ವಿಷ್ಣುಪರವಾಗಿದ್ದಲ್ಲಿ ಕರ್ಮಗಳನ್ನು ವಿಧಿಸಿದಂತಾಗುವುದಿಲ್ಲವಲ್ಲ ? ಎಂದು ಪ್ರಶ್ನೆ ಮಾಡಿದರೆ, ''ಮಾಂ ಪ್ರತ್ಯೇವ'' ಎಂಬ ವಾಕ್ಯದಿಂದ ಉತ್ತರವನ್ನು ಹೇಳುತ್ತಿದ್ದಾರೆ. ಭಗವಂತನ ಪ್ರೀತಿಯ ಸಲುವಾಗಿಯೇ ಈ ವಿಧಿವಾಕ್ಯಗಳು ಕರ್ಮಾದಿಗಳನ್ನು ವಿಧಾನ ಮಾಡುತ್ತಿರುವುದರಿಂದ ದೋಷವಿಲ್ಲ. ''ಮಾಮಭಿಧಾತ್ರಿ'' ಎಂದರೆ ಪರಮಮುಖ್ಯವೃತ್ತಿಯಿಂದ ಎಂದರ್ಥ. ''ವಿವಿಧರೂಪತ್ವೇನ'' ಎಂದರೆ ವಾಸುದೇವನೇ ಮೊದಲಾದ ರೂಪಗಳಿಂದ ಎಂದರ್ಥ.

''ಕಲ್ಪ್ಯಃ'' ಎಂದರೆ ಜ್ಞೇಯ ಎಂದರ್ಥ. ''ಅಪ್ರಿಯತ್ವಾದಪೋಹ್ಯಃ'' ಎಂದರೆ ಸುರಾ-ಪಾನಾದಿಗಳು ನನ್ನ ಪ್ರೀತಿಗೆ ಸಾಧಕವಾಗದಿರುವದರಿಂದ ಅವುಗಳನ್ನು ನಿಷೇಧ ಮಾಡಲ್ಪಟ್ಟಿದೆ ಎಂದರ್ಥ. ಭಾಗವತವಾಕ್ಯದಲ್ಲಿರುವ ''ಇತ್ಯಸ್ಯಾಃ'' ಎಂಬ ಪದದಲ್ಲಿರುವ ''ಇತಿ'' ಶಬ್ದದ ವ್ಯಾಖ್ಯಾನವನ್ನು ''ಏವಂ ಭೂತಾಯಾಃ'' ಎಂಬ ವಾಕ್ಯದಿಂದ ಮಾಡುತ್ತಿದ್ದಾರೆ. ''ಇತ್ಯಭಿಪ್ರಾಯಂ'' ಎಂದು ಹೇಳಿದ್ದರಿಂದ ''ಅಸ್ಯಾಃ'' ''ಹೃದಯಂ'' ಎಂಬೆರಡರ ಮಧ್ಯದಲ್ಲಿ ''ಮಾಂ ವಿಧತ್ತೇ'' ಇತ್ಯಾದಿ ವಾಕ್ಯವನ್ನು ಯೋಜನೆ ಮಾಡಿಕೊಳ್ಳಬೇಕು.

## ಕರ್ಮಕಾಂಡ ಪ್ರತಿಪಾದಕತ್ವವನ್ನು ಹೇಳುವುದು ಅನಿವಾರ್ಯವೆ?

**भावदीपः** – 'ननु जिज्ञास्यब्रह्मणो जन्मादिसूत्रोक्तजगज्जन्मादिकारणत्व रूपलक्षणस्यातिव्याप्तिनिरासायोपक्रमादिन्यायैः कारणवाक्यराशिप्रतिपाद्यत्व मात्रं प्रतिज्ञातव्यं न तु कर्मकाण्डादिसर्वशास्त्रप्रतिपाद्यत्वम्, शास्त्रयोनिसूत्रे तावदेव हेतूकर्तव्यम्' इत्याशङ्कां निरस्यन् समग्रसूत्रार्थं च व्यञ्जयन्, फलोक्त्या उपसंहरति – **तस्मादिति** ।। 'उपक्रमादीनामेव तात्पर्यार्थ-निर्णायकत्वात्' इत्यर्थः । 'अयं चोपक्रमादिलक्षणः समन्वय एव शास्त्रप्रतिपाद्यत्वे कारणम्' इति न्यायविवरणे, 'लिङ्गं तात्पर्यनिर्णय' इति भाष्ये चोक्तार्थस्य हेतुतयोपसंहारः । 'समन्वयात्' इति सौत्रहेत्वर्थस्योपसंहारः – **उपक्रमादिवशादिति** ।। तत्विस्य विष्णुरेवेति ।'सं'शब्दोत्र सूत्रे आवर्तमानः सन् अनुवर्तमानशास्त्रयोनिपदेनाप्यन्वेति, तत्र साकल्य मुख्यत्वं चास्यार्थ इत्युपेत्याह – **सर्वशास्त्रैरिति** ।। **उच्यत इति** ।। 'स्वरवर्णपदवाक्यात्मना मुख्यवृत्त्या प्रतिपाद्यते' इत्यर्थः । 'मुख्यार्थो भगवान् विष्णुः सर्वशास्त्रस्य नापरः' इत्यनुभाष्योक्तेः । कथम् उच्यते? इत्यतः 'कारणत्वे'त्यादि-पूर्वसूत्रेन्वितं कारणस्येत्येतदिह कारणत्वेनेत्येवमन्वेति तच्चोपलक्षणमित्यर्थः। 'कारणत्वाद्यनन्तगुणतयेति' इति यावत् ।

ಇಲ್ಲಿ ಹೀಗೊಂದು ಪ್ರಶ್ನೆ ಬರಬಹುದು. "ಜಿಜ್ಞಾಸ್ಯನಾದ ಬ್ರಹ್ಮನಿಗೆ ಜನ್ಮಾದಿಸೂತ್ರದಲ್ಲಿ ಹೇಳಿದ ಜಗಜ್ಜನ್ಮಾದಿಕಾರಣತ್ವರೂಪವಾದ ಲಕ್ಷಣಕ್ಕೆ ಅತಿವ್ಯಾಪ್ತಿಯನ್ನು ನಿರಾಸ-ಮಾಡುವುದಕ್ಕಾಗಿ ಉಪಕ್ರಮಾದಿನ್ಯಾಯಗಳಿಂದ ಜಗಜ್ಜನ್ಮಾದಿಕಾರಣತ್ವವನ್ನು ತಿಳಿಸುವ ವಾಕ್ಯಗಳ ಸಮುದಾಯದಿಂದ ಭಗವಂತನು ಪ್ರತಿಪಾದ್ಯನಾಗಿದ್ದಾನೆ ಎಂದಷ್ಟೇ ಪ್ರತಿಜ್ಞೆ ಮಾಡಬೇಕಲ್ಲದೆ ಕರ್ಮಕಾಂಡಾದಿ ಸರ್ವಶಾಸ್ತ್ರದಿಂದ ಪ್ರತಿಪಾದ್ಯನಾಗಿದ್ದಾನೆ' ಎಂದು ಪ್ರತಿಜ್ಞೆ ಮಾಡಬಾರದು. ಶಾಸ್ತ್ರಯೋನಿಸೂತ್ರದಿಂದಲೂ ಕೂಡ ಅಷ್ಟಂಶವನ್ನು ಮಾತ್ರ ಹೇತುವಾಗಿಸಬೇಕು.'' ಎಂದು. ಈ ಪ್ರಶ್ನೆಗೆ ಉತ್ತರವನ್ನು ನೀಡುತ್ತಾ, ಸಮಗ್ರಸೂತ್ರಾರ್ಥವನ್ನು

ಸ್ಪಷ್ಟವಾಗಿ ತಿಳಿಸುತ್ತಾ ನಿರ್ಣಯದ ಫಲವನ್ನು ತಿಳಿಸುವ ಮೂಲಕ ''ತಸ್ಮಾತ್'' ಇತ್ಯಾದಿ ವಾಕ್ಯದಿಂದ ಉಪಸಂಹಾರ ಮಾಡುತ್ತಿದ್ದಾರೆ. 'ತಸ್ಮಾತ್' ಎಂಬ ಶಬ್ದಕ್ಕೆ ಉಪಕ್ರಮಾದಿಗಳೇ ತಾತ್ಪರ್ಯಾರ್ಥವನ್ನು ನಿರ್ಣಯ ಮಾಡುವುದರಿಂದ ಎಂಬುದಾಗಿ ಅರ್ಥ. ನ್ಯಾಯವಿವರಣದಲ್ಲಿ 'ಅಯಂ ಚ ಉಪಕ್ರಮಾದಿಲಕ್ಷಣಃ ಸಮನ್ವಯ ಏವ ಶಾಸ್ತ್ರಪ್ರತಿಪಾದ್ಯತ್ವೇ ಕಾರಣಮ್' ಎಂಬುದಾಗಿ ಭಾಷ್ಯದಲ್ಲಿ 'ಲಿಂಗಂ ತಾತ್ಪರ್ಯನಿರ್ಣಯೇ' ಎಂಬುದಾಗಿಯೂ ಹೇಳಿದ ಅರ್ಥವನ್ನೇ ಹೇತುತಯಾ ಇಟ್ಟುಕೊಂಡು ಈ ರೀತಿಯಾಗಿ ಉಪಸಂಹಾರ ಮಾಡಿದ್ದಾರೆ. ''ಸಮನ್ವಯಾತ್'' ಎಂಬ ಸೂತ್ರದಲ್ಲಿ ಹೇಳಿದ ಹೇತುವನ್ನು 'ಉಪಕ್ರಮಾದಿವಶಾತ್' ಎಂಬ ಅರ್ಥವನ್ನು ಹೇಳುವ ಮೂಲಕ ಉಪಸಂಹಾರ ಮಾಡಿದ್ದಾರೆ. 'ತತ್ತು' ಎಂಬ ಶಬ್ದಕ್ಕೆ 'ವಿಷ್ಣುರೇವ' ಎಂಬುದಾಗಿ ಅರ್ಥ. ಸೂತ್ರದಲ್ಲಿರುವ 'ಸಂ'ಶಬ್ದವನ್ನು ಇನ್ನೊಮ್ಮೆ ಆವೃತ್ತಿ ಮಾಡಿಕೊಂಡು ಹಿಂದಿನ ಸೂತ್ರದಿಂದ ಅನುವೃತ್ತಿಮಾಡಿದ ಶಾಸ್ತ್ರಯೋನಿಪದದಿಂದ ಅನ್ವಯವನ್ನು ಹೇಳಬೇಕು. ಅಲ್ಲಿ ಈ 'ಸಂ' ಎಂಬ ಪದಕ್ಕೆ ಸಾಕಲ್ಯವು ಮತ್ತು ಮುಖ್ಯತ್ವವು ಅರ್ಥವಾಗಿದೆ ಎಂಬುದಾಗಿ ಹೊಂದಿಸಿಕೊಂಡು ''ಸರ್ವಶಾಸ್ತ್ರೈಃ'' ಎಂಬುದಾಗಿ ಅಭಿಪ್ರಾಯವನ್ನು ಬಿಡಿಸಿದ್ದಾರೆ. ''ಉಚ್ಯತೇ'' ಎಂಬ ಶಬ್ದಕ್ಕೆ 'ಸ್ವರವರ್ಣಪದವಾಕ್ಯರೂಪವಾದ ಮುಖ್ಯವೃತ್ತಿಯಿಂದ ಪ್ರತಿಪಾದಿಸಲ್ಪಡುತ್ತದೆ' ಎಂಬುದಾಗಿ ಅರ್ಥ. ಇದನ್ನು ಅನುವ್ಯಾಖ್ಯಾನದಲ್ಲಿ 'ಮುಖ್ಯಾರ್ಥೋ ಭಗವಾನ್ ವಿಷ್ಣುಃ ಸರ್ವಶಾಸ್ತ್ರಸ್ಯ ನಾಪರಃ' (ಎಲ್ಲಾ ಶಾಸ್ತ್ರಗಳಿಗೂ ಕೂಡ ಸರ್ವೈಶ್ವರ್ಯಸಮನ್ವಿತನಾದ ವಿಷ್ಣುವೇ ಮುಖ್ಯವಾದ ಅರ್ಥ ಹೊರತು ಬೇರೆಯವರಲ್ಲ) ಎಂಬುದಾಗಿ ವಿವರಿಸಿದ್ದಾರೆ. ''ಉಚ್ಯತೇ'' ಎಂಬ ಅಂಶದಲ್ಲಿ ಹೇಗೆ ಹೇಳಲ್ಪಡುತ್ತಿದ್ದಾನೆ? ಎಂಬುದನ್ನು ಸ್ಪಷ್ಟಪಡಿಸಲು 'ಕಾರಣತ್ವ' ಎಂಬುದಾಗಿ ಹಿಂದಿನ ಸೂತ್ರದಲ್ಲಿ ಅನ್ವಯಿಸಿಕೊಂಡ 'ಕಾರಣಸ್ಯ' ಎಂಬ ಅಂಶವನ್ನು ಕಾರಣತ್ವೇನ ಎಂಬುದಾಗಿ ಈ ಸೂತ್ರದಲ್ಲಿ ಅನ್ವಯ ಮಾಡಿಕೊಳ್ಳಬೇಕು. ಇದನ್ನು ಉಪಲಕ್ಷಣತಯಾ ಇಟ್ಟುಕೊಂಡು ಕಾರಣತ್ವಾದಿ ಅನಂತಗುಣಗಳಿಂದ ಕೂಡಿಕೊಂಡು ಎಂದರ್ಥವನ್ನು ತಿಳಿಯಬೇಕು.

ವಿಶೇಷ ವಿಚಾರ – ''ಉಪಲಕ್ಷಿತಾನಂತ'' ಇತ್ಯಾದಿ ಟೀಕೆಯ ಅಭಿಪ್ರಾಯ ಹೀಗಿದೆ – 'ಈ ಅಧಿಕರಣದಲ್ಲಿ ಶಾಸ್ತ್ರಪದದಿಂದ ವಾಚ್ಯವಾದ ಅನಂತವಾದ ವೇದಾದಿಸದಾಗಮಗಳು ಜನ್ಮಾದಿಕಾರಣತ್ವವೇ ಮೊದಲಾದ ಲಕ್ಷಣಗಳನ್ನು, ಮತ್ತು ಆನಂದವೇ ಮೊದಲಾದ

ಗುಣಗಳನ್ನು ಪ್ರತಿಪಾದನೆ ಮಾಡುವ ಪದಗಳ ಸಮನ್ವಯವನ್ನು ಹೇಳಲಾಗಿದೆಯೆಂದು ತಿಳಿಯಬೇಕು.

ಸಂಶಬ್ದದ ಸ್ವಾರಸ್ಯ

'ಓಂ ತತ್ತು ಸಮನ್ವಯಾತ್ ಓಂ' ಎಂಬಲ್ಲಿ 'ಸಂ' ಎಂದರೆ ಸಮ್ಯಕ್ ಸರಿಯಾಗಿ ಎಂದು ಅರ್ಥ. ಪ್ರವಿಚಾರಿತೇ ಎಂದು ಅಧ್ಯಾಹಾರ ಮಾಡಬೇಕು. ಆಗ ಉಪಕ್ರಮಾದಿ ಲಿಂಗಗಳಿಂದ ಸರಿಯಾಗಿ ಶಾಸ್ತ್ರವಿಚಾರ ಮಾಡಿದಾಗ ವಿಷ್ಣುವೇ ಸರ್ವಶಾಸ್ತ್ರದ ಮುಖ್ಯಾರ್ಥ ಎಂದು ತಿಳಿಯುತ್ತದೆ ಎಂದು ಸೂತ್ರಾರ್ಥ. ವಿಚಾರಣೆ ಎಂದರೆ ಬಲಾಬಲ ನಿರ್ಣಯ ಎಂದರ್ಥ.

ಸರಿಯಾಗಿ ವಿಚಾರ ಮಾಡದಿದ್ದರೆ ಉಪಕ್ರಮಾದಿಲಿಂಗಗಳೂ ಕೂಡ ವ್ಯಭಿಚರಿತವಾಗುತ್ತವೆ. ಹೇಗೆಂದರೆ, ಪ್ರಾಣೋ ಬ್ರಹ್ಮ ಕಂ ಬ್ರಹ್ಮ ಖಂ ಬ್ರಹ್ಮ ಎಂಬಲ್ಲಿ ಉಪಕ್ರಮದಲ್ಲಿ ಪ್ರಾಣ ಪದವಿದೆ. ಆದರೂ ಇಲ್ಲಿ ಉಪಕ್ರಮವು ಇದು ಪ್ರಾಣವಿದ್ಯೆ ಎಂದು ಸಾಧಿಸಲು ಸಮರ್ಥವಾಗಿಲ್ಲ. ಹಾಗೆಯೇ ಹ್ವಯಾಮ್ಯಗ್ನಿಂ ಪ್ರಥಮಂ ಎಂಬ ವಾಕ್ಯದಲ್ಲಿ ಉಪಕ್ರಮದಲ್ಲಿ (ಆರಂಭದಲ್ಲಿ) ಅಗ್ನಿ ಪದವಿದೆ. ಆದರೂ ಇದು ಅಗ್ನಿ ವಿದ್ಯೆಯೆಂಬುದನ್ನು ಅದು ಸಾಧಿಸುವುದಿಲ್ಲ.

ಬ್ರಹ್ಮವಲ್ಲಿಯಲ್ಲಿ''ತಸ್ಯೈಷ ಏವ ಶಾರೀರ ಆತ್ಮಾ ಯ: ಪೂರ್ವಸ್ಯ ''ಎಂಬಲ್ಲಿ ಉಪಸಂಹಾರದಲ್ಲಿ ಜೀವವಾಚಕ ಶಾರೀರ ಪದವಿದ್ದರೂ ಇಲ್ಲಿ ಉಪಸಂಹಾರವು 'ಬ್ರಹ್ಮವಲ್ಲಿಯು ಜೀವಪರ ' ಎನ್ನುವುದಕ್ಕೆ ಹೇತುವಾಗುವುದಿಲ್ಲ.

ಇತರ ವ್ಯಪದೇಶಾತ್ ಹಿತಾಕರಣಾದಿ ದೋಷ ಪ್ರಸಕ್ತಿ: ಎಂಬಲ್ಲಿ ಪೂರ್ವಪಕ್ಷದಲ್ಲಿ ಉದಾಹರಿಸಲ್ಪಟ್ಟ ''ಜೀವಾದ್ ಭವಂತಿ ಭೂತಾನಿ ಜೀವೇ ತಿಷ್ಠಂತ್ಯಚಂಚಲಾ:'' ಎಂಬ ವಾಕ್ಯದಲ್ಲಿ ಜೀವ ಶಬ್ದದ ಅಭ್ಯಾಸ(ಆವೃತ್ತಿ) ಇದ್ದರೂ ಅದು ಆ ವಾಕ್ಯಕ್ಕೆ ಜೀವ ಪರತ್ವ ಸಾಧಕವಲ್ಲ.

''ಅಸದ್ವಾ ಇದಮಗ್ರ ಆಸೀತ್ ತತೋ ವೈ ಸದಜಾಯತ'' ಎಂಬಲ್ಲಿ ಅಸತ್ ನಿಂದ ಸನ್ನಾಮಕನಾದ ವಿಷ್ಣು ಜನಿಸಿದ ಎಂಬ ಅರ್ಥವನ್ನು ಹೇಳಿದರೆ ಅಪೂರ್ವತಾ ಬರುತ್ತದೆ. ಆದರೆ ಆ ಅಪೂರ್ವತಾ ಎಂಬುದು ಆ ಅರ್ಥಕ್ಕೆ ಸಾಧಕವಾದದ್ದು ಕಂಡಿಲ್ಲ.

'ಉದ್ಭಿದಾ ಯಜೇತ ಪಶುಕಾಮ: 'ಎಂಬಲ್ಲಿ ಪಶುಕಾಮ: ಎಂದು ಫಲವತ್ತ್ವ ಕಂಡಿದೆ. ಆದರೆ ಆ ಫಲವತ್ತ್ವವು ಆ ವಾಕ್ಯವು ಕಾಮ್ಯ ಕರ್ಮಪರ ಎಂಬುದಕ್ಕೆ

ಹೇತುವಲ್ಲ. ಏಕೆಂದರೆ ''ಉತ್ಕ್ರಮಿಷ್ಯತ ಏವಂ ಭಾವಾದಿತ್ಯೌಡು ಲೋಮಿ:'' ಎಂಬ ಬ್ರಹ್ಮ ಸೂತ್ರದಲ್ಲಿ ಕರ್ಮಾದಿಗಳು ಅಂತ:ಕರಣ ಶುದ್ಧಿದ್ವಾರಾ ಜ್ಞಾನ ಪ್ರಯೋಜಕವಾದ್ದರಿಂದ ಜ್ಞಾನಾಂಗ ಎಂದು ಸಮರ್ಥಿಸಿದ್ದಾರೆ.

ಅದ್ವೈತಿಗಳಿಂದ ಅದ್ವೈತ ಪ್ರಕರಣ ಎಂದು ಪರಿಗಣಿಸಲ್ಪಟ್ಟ ಐತದಾತ್ಮ್ಯಮಿದಂ ಸರ್ವಂ ಎಂಬ ಪ್ರಕರಣದಲ್ಲಿ ತಸ್ಯ ತಾವದೇವ ಚಿರಂ ಯಾವನ್ನ ವಿಮೋಕ್ಷ್ಯೇ (ಪ್ರಾರಬ್ಧ ಕರ್ಮನಾಶವಾಗುವವರೆಗೆ ಮಾತ್ರ ವಿಲಂಬ. ಪ್ರಾರಬ್ಧನಾಶವಾದ ಕೂಡಲೇ ಮೋಕ್ಷ) ಎಂದು ಪ್ರಶಂಸೆ ಮಾಡಿದ್ದಾರೆ. ಇಂತಹ ಅರ್ಥವಾದ ವಾಕ್ಯವಿದ್ದರೂ ಕೂಡ ಆ ಪ್ರಕರಣವು ಐಕ್ಯಪರವಲ್ಲ.

ಹಾಗೆಯೇ, ಅಗ್ನಿಗಳು ಉಪಕೋಸಲನಿಗೆ ವಿದ್ಯೆಯನ್ನುಪದೇಶಿಸಿ 'ಇದನ್ನು ತಿಳಿದವನನ್ನು ('ಉಪವಯಂ ತಂ ಭುಂಜಾಮ:') ಭೃತ್ಯರು ಯಾವಾಗಲೂ ಸೇವಿಸುತ್ತಾರೆ ಎಂದು ಪ್ರಶಂಸಿಸಿದ್ದಾರೆ ಮತ್ತು ಅಸ್ಮದ್ವಿದ್ಯಾ ಉಪದಿಷ್ಟಾ (ನಮ್ಮ ವಿದ್ಯೆಯನ್ನು ಉಪದೇಶಿಸಿದ್ದೇವೆ) ಎಂದಿದ್ದಾರೆ. ಇಲ್ಲಿ ಅರ್ಥವಾದವಿದ್ದರೂ ಅಸ್ಮದ್ವಿದ್ಯೆ ಎಂದರೆ ಅಗ್ನಿ ವಿದ್ಯೆಯನ್ನು ಇಟ್ಟುಕೊಂಡಿಲ್ಲ. ಏಕೆಂದರೆ ಮೇಲೆ ವಿವರಿಸಿದ ಎಲ್ಲ ಲಿಂಗಗಳೂ ದುರ್ಬಲ. ಆದ್ದರಿಂದ ಸಮನ್ವಯಾತ್ ಎನ್ನುವುದಕ್ಕೆ ಪ್ರಬಲವೆಂದು ನಿರ್ಣೀತವಾದ ಉಪಕ್ರಮಾದಿಗಳಿಂದ ವಿಷ್ಣುವೇ ಶಾಸ್ತ್ರ ಪ್ರತಿಪಾದ್ಯ ಎಂದು ಅರ್ಥ ಹೇಳಬೇಕು.

## ಸಕಲಶಬ್ದಗಳ ಸಮನ್ವಯದಿಂದ ಸಕಲಗುಣಪರಿಪೂರ್ಣತ್ವದ ಸಿದ್ಧಿ

**भावदीपः** – अयं भावः । जिज्ञास्यब्रह्मणो ब्रह्मपदोक्तमनन्तगुणत्वं प्रथमलक्षणम् । तत्प्रसिद्ध्यर्थं 'जन्मादिकारणत्वं लक्षणम्' इति सर्वशब्द-प्रवृत्तिनिमित्तवत्तया सर्वशास्त्रप्रतिपाद्यत्वस्याप्रतिज्ञायां प्रधानलक्षणं न सिद्ध्यतीति, तत् सिद्ध्यर्थं मुख्यवृत्त्या सर्वशास्त्रयोनित्वप्रतिज्ञा युक्तेति । तदुक्तमनुव्याख्याने –

'जन्माद्यस्येति सूत्रेण गुणसर्वस्वसिद्धये ।
ब्रह्मणो लक्षणं प्रोक्तं शास्त्रमूलं यतस्ततः ।
अन्वयं सर्वशब्दानां गुणसर्वस्ववेदकः ।।' इत्यादि ।
ಸಮನ್ವಯಾಧಿಕರಣ (೧-೧-೪)

'तस्यैव एतत् लक्षणम्' इति फलोक्तिः । 'एतत्कारणत्वमनन्तगुणत्वं च' इत्यर्थः । अत्रोपक्रमादिभिः शास्त्रप्रतिपाद्यत्वस्याबाधे सति मुख्यत्वस्य प्राप्तावपि न सर्वशास्त्रावस्य प्राप्तिः । तथापि तत्र 'गतिसामान्यात्' इति हेतुरग्रे स्पष्ट इति भावः ।

ಈ ಸೂತ್ರದ ಅಭಿಪ್ರಾಯ ಹೀಗಿದೆ - ಜಿಜ್ಞಾಸ್ಯನಾದ ಬ್ರಹ್ಮನಿಗೆ ಬ್ರಹ್ಮಪದದಲ್ಲಿ ತಿಳಿಸಿದ ಅನಂತಗುಣತ್ವವು ಮೊದಲನೆಯ ಲಕ್ಷಣ. ಈ ಲಕ್ಷಣವು ಪ್ರಸಿದ್ಧವಾಗುವುದಕ್ಕೋಸ್ಕರ ಜನ್ಮಾದಿಕಾರಣತ್ವವು ಲಕ್ಷಣವಾಗಿದೆ. ಹೀಗೆ ಎಲ್ಲಾ ಶಬ್ದಗಳ ಪ್ರವೃತ್ತಿನಿಮಿತ್ತವಿರುವುದರಿಂದ ಸರ್ವಶಾಸ್ತ್ರಗಳಿಂದ ಪ್ರತಿಪಾದ್ಯನಾಗಿದ್ದಾನೆ ಎಂಬ ವಿಷಯವನ್ನು ಪ್ರತಿಜ್ಞೆ ಮಾಡದಿದ್ದರೆ ಪ್ರಧಾನಲಕ್ಷಣವು ಸಿದ್ಧವಾಗುವುದಿಲ್ಲ. ಇದಕ್ಕಾಗಿ ಈ ಪ್ರಧಾನಲಕ್ಷಣವು ಸಿದ್ಧವಾಗುವುದಕ್ಕೋಸ್ಕರ ಮುಖ್ಯವೃತ್ತಿಯಿಂದ ಸರ್ವಶಾಸ್ತ್ರಯೋನಿತ್ವವನ್ನು ಪ್ರತಿಜ್ಞೆ ಮಾಡಿರುವುದು ಯುಕ್ತವಾಗಿದೆ. ಇದನ್ನು ಅನುವ್ಯಾಖ್ಯಾನದಲ್ಲಿ ಹೀಗೆ ತಿಳಿಸಿದ್ದಾರೆ.

'ಜನ್ಮಾದ್ಯಸ್ಯೇತಿ ಸೂತ್ರೇಣ ಗುಣಸರ್ವಸ್ವಸಿದ್ಧಯೇ ।
ಬ್ರಹ್ಮಣೋ ಲಕ್ಷಣಂ ಪ್ರೋಕ್ತಂ ಶಾಸ್ತ್ರಮೂಲಂ ಯತಸ್ತತಃ ।
ಅನ್ವಯಃ ಸರ್ವಶಬ್ದಾನಾಂ ಗುಣಸರ್ವಸ್ವವೇದಕಃ ॥'

''ಜನ್ಮಾದ್ಯಸ್ಯ'' ಎಂಬ ಸೂತ್ರದಿಂದ ಬ್ರಹ್ಮನು ಸರ್ವಗುಣಪರಿಪೂರ್ಣ ಎಂದು ಸಿದ್ಧವಾಗುವುದಕ್ಕೋಸ್ಕರ ಬ್ರಹ್ಮನ ಲಕ್ಷಣವನ್ನು ಹೇಳಿದ್ದಾರೆ. ಇದಕ್ಕೆ ಶಾಸ್ತ್ರವೇ ಮೂಲವಾಗಿರುವುದರಿಂದ ಶಾಸ್ತ್ರದಲ್ಲಿ ಕಂಡುಬರುವ ಕಾರಣತ್ವೇನ ಉಕ್ತವಾದ ಬೇರೆಯವರನ್ನು ನಿರಾಕರಣೆ ಮಾಡಬೇಕಾಗಿದೆ. ಹೀಗೆ "ಸರ್ವಶಬ್ದಗಳ ಸಮನ್ವಯವು ಸರ್ವಗುಣಪರಿಪೂರ್ಣತ್ವವನ್ನು ಸಿದ್ಧಗೊಳಿಸುತ್ತದೆ.'' ಎಂಬುದಾಗಿ.

'ತಸ್ಯೈವ ಏತಲ್ಲಕ್ಷಣಮ್' ಎಂಬುದಾಗಿ ನಿರ್ಣಯರೂಪವಾದ ಫಲವನ್ನು ಹೇಳಿದ್ದಾರೆ. 'ಏತಲ್ಲಕ್ಷಣಮ್' ಎಂಬುದಕ್ಕೆ 'ಈ ಜಗತ್ತಿನ ಜನ್ಮಾದಿಗಳಿಗೆ ಕಾರಣನಾಗಿರುವುದು ಮತ್ತು ಅನಂತಗುಣಗಳಿಂದ ಕೂಡಿರುವುದು' ಎಂಬುದಾಗಿ ಅರ್ಥ. ಈ ಸೂತ್ರದಲ್ಲಿ ಉಪಕ್ರಮಾದಿ ನ್ಯಾಯಗಳಿಂದ ಶಾಸ್ತ್ರಪ್ರತಿಪಾದ್ಯತ್ವವನ್ನು ಅಬಾಧಿತ ಎಂಬುದಾಗಿ ತಿಳಿದರೂ ಅದರಿಂದಲೇ ಮುಖ್ಯತ್ವವು ಪ್ರಾಪ್ತವಾಗಿದ್ದರೂ ಧರ್ಮಶಾಸ್ತ್ರಗಳಿಗೂ ಇವನೇ ಅರ್ಥ ಎಂಬ ಅಂಶವು

ಪ್ರಾಪ್ತವಾಗುವುದಿಲ್ಲ. ಹಾಗಿದ್ದರೂ ಇದೇ ವಿಷಯದಲ್ಲಿ 'ಗತಿಸಾಮಾನ್ಯಾತ್' ಎಂಬ ನ್ಯಾಯವು ಮುಂದಿನ ಗ್ರಂಥಭಾಗದಲ್ಲಿ ಸ್ಪಷ್ಟವಾಗಿದೆ ಎಂಬ ಅಭಿಪ್ರಾಯವನ್ನು ಇಲ್ಲಿ ಗ್ರಹಿಸಬೇಕು.

## 'ಏತೇನ ಸರ್ವೇ' ಎಂಬ ಸೂತ್ರದಿಂದ ಪುನರುಕ್ತಿಯಿಲ್ಲ

**भावदीपः** – यत्तु – 'एतेन सर्वे व्याख्याताः' इत्यनेनेदं गतार्थम् । वाक्यान्तरेऽन्यस्यापि कारणत्वं प्रतीयत इति चोद्यस्य प्रागुक्तन्यायातिदेशेन निरसिष्यमाणत्वादित्युपालम्भनम् । तन्न । त्वन्मते तथात्वेप्यस्मन्मते तत्र निषेधमुखेन वेद्यवस्तुवाचिपदघटितवाक्यानामेव विचार्यत्वेनागतार्थत्वात् । विरोधिसर्वबाहुल्यकारणस्त्रीनिषेधिनामित्युक्तेः । किञ्चेह आपातप्रतीत्यादिना पूर्वपक्षः तत्र तु प्रवृत्तिनिमित्ताभावेन, किञ्चेह कारणत्वं विष्ण्वेकनिष्ठं नेति तत्र तु सर्वशब्दवाच्यत्वं नेति । अत्रोक्तस्याग्रे न्यायातिदेशेन प्रपञ्चनाच्च न कश्चिद् दोष इति ।।४।।

।। इति श्रीमद्भाष्यटीकाभावदीपे राघवेन्द्रयतिकृते समन्वयाधिकरणम् ।।१/१/४।।

ಇಲ್ಲಿ ಕೆಲವರು ಹೀಗೆ ಪ್ರಶ್ನೆ ಮಾಡುತ್ತಾರೆ. ಈ ಸೂತ್ರದಲ್ಲಿ ನೀವು ಈ ರೀತಿ ವ್ಯಾಖ್ಯಾನಮಾಡಿರುವುದರಿಂದ 'ಏತೇನ ಸರ್ವೇ ವ್ಯಾಖ್ಯಾತಾಃ' ಎಂಬ ಸೂತ್ರದಿಂದ ಇದು ಗತಾರ್ಥವಾಯಿತು. ವಾಕ್ಯಾಂತರದಿಂದ 'ವಿಷ್ಣುವನ್ನು ಬಿಟ್ಟು ಬೇರೆಯವರಿಗೂ ಕೂಡ ಕಾರಣತ್ವವು ಪ್ರತೀಯಮಾನವಾಗಿದೆ' ಎಂಬ ಚೋದ್ಯಕ್ಕೆ ಹಿಂದೆ ಹೇಳಿದ ನ್ಯಾಯವನ್ನು ಅತಿದೇಶಮಾಡಿಕೊಂಡು ಅದನ್ನು ನಿರಾಸ ಮಾಡುವುದರಿಂದ ಈ ಗತಾರ್ಥತ್ವವನ್ನು ನೀವು ಒಪ್ಪಿಕೊಳ್ಳಬೇಕು. ಈ ಪ್ರಶ್ನೆಗೆ ಉತ್ತರ ಹೀಗಿದೆ. "ನಿಮ್ಮ ಮತದಂತೆ ಈ ಪ್ರಶ್ನೆಯು ಸರಿಯಾಗಿದ್ದರೂ ನಮ್ಮ ಅಭಿಪ್ರಾಯದಂತೆ ಮುಂದೆ ಹೇಳಲಿರುವ ಆ ಸೂತ್ರದಲ್ಲಿ ನಿಷೇಧಮುಖವಾಗಿ ವೇದ್ಯವಸ್ತುವನ್ನು ತಿಳಿಸುವ ಪದಗಳಿಂದ ಕೂಡಿದ ವಾಕ್ಯಗಳನ್ನೇ ವಿಚಾರ ಮಾಡುತ್ತಿರುವುದರಿಂದ ಗತಾರ್ಥತ್ವವು ಬರುವುದಿಲ್ಲ. ಇದನ್ನು ಅನುವ್ಯಾಖ್ಯಾನದಲ್ಲಿ

'ವಿರೋಧಿಸರ್ವಬಾಹುಲ್ಯಕಾರಣಸ್ತ್ರೀನಿಷೇಧಿನಾಮ್' ಎಂಬಲ್ಲಿ ನಿಷೇಧಮುಖವಾದ ವಾಕ್ಯಗಳನ್ನು ಅಲ್ಲಿ ಸಮನ್ವಯ ಮಾಡುತ್ತಿದ್ದಾರೆ ಎಂದು ತಿಳಿಸಿದ್ದಾರೆ. ಅಷ್ಟೇ ಅಲ್ಲದೆ ಈ ಸೂತ್ರದಲ್ಲಿ ಆಪಾತಪ್ರತೀತಿಯೇ ಮೊದಲಾದ ಹೇತುಗಳಿಂದ ಪೂರ್ವಪಕ್ಷವನ್ನು ಮಾಡುತ್ತಿದ್ದಾರೆ. ಮುಂದಿನ ಸೂತ್ರದಲ್ಲಿ ಪ್ರವೃತ್ತಿನಿಮಿತ್ತ ಇಲ್ಲದಿರುವುದರಿಂದ ಪೂರ್ವಪಕ್ಷವು ಉಂಟಾಗಿದೆ. ಅಲ್ಲದೆ ಈ ಸೂತ್ರದಲ್ಲಿ 'ಕಾರಣತ್ವವು ಕೇವಲ ವಿಷ್ಣುವಿನಲ್ಲಿರುವುದು ಅಲ್ಲ' ಎಂಬುದು ಪೂರ್ವಪಕ್ಷದ ಅಭಿಪ್ರಾಯವಾಗಿದ್ದರೆ ಆ ಸೂತ್ರದಲ್ಲಿ ವಿಷ್ಣುವು ಸರ್ವಶಬ್ದವಾಚ್ಯನಲ್ಲ ಎಂಬ ಪೂರ್ವಪಕ್ಷವಿದೆ. ಮತ್ತು ಈ ಸೂತ್ರದಲ್ಲಿ ಸೂಚಿಸಲಾದ ವಿಷಯವನ್ನು ಮುಂದೆ ನ್ಯಾಯವನ್ನು ಹೇಳುವುದರ ಮೂಲಕ ಸ್ಪಷ್ಟಪಡಿಸುತ್ತಿರುವುದರಿಂದ ಗತಾರ್ಥತಾ ಮೊದಲಾದ ಯಾವುದೇ ದೋಷವು ಇಲ್ಲ.

॥ ಇಲ್ಲಿಗೆ ಭಾವದೀಪದ ಕನ್ನಡಾನುವಾದದಲ್ಲಿ ಸಮನ್ವಯಾಧಿಕರಣವು ಮುಗಿಯಿತು ॥

# ಪರಿಶಿಷ್ಟ

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

प्रथमाध्याये प्रथमः पादः जिज्ञासाधिकरणम्-१-१-१

जयन्ति जानकीभर्तृश्चरणाम्भोजरेणवः ।
नमत्सुरकिरीटस्थान् ये मणीनतिशेरते ।।१।।

ಅನುವಾದ -- ಸೀತಾಪತಿಯಾದ ಶ್ರೀರಾಮಚಂದ್ರನ ಪಾದಕಮಲಗಳಲ್ಲಿ ಭೃಂಗಾಯಮಾನವಾದ ಧೂಳಿನ ಕಣಗಳು ವಿಜಯಶಾಲಿಗಳಾಗಿವೆ. ಇಂತಹ ಪಾದಕಮಲದಲ್ಲಿ ಎಲ್ಲ ದೇವತೆಗಳು ತಮ್ಮ ಕಿರೀಟಗಳನ್ನು ಘಟ್ಟಿಸುತ್ತಾರೆ. ಕಿರೀಟದಲ್ಲಿ ಹೊಳೆಯುವ ಆ ಮಣಿಗಳ ಕಾಂತಿಗಿಂತಲೂ ಈ ಪಾದಧೂಳಿಗಳ ಕಾಂತಿಯೇ ಹೆಚ್ಚಾಗಿದೆ.

दुरन्तदुरितध्वान्तविपाटनपटीयसे ।
बादरायणसञ्ज्ञाय परस्मै महसे नमः ।।२।।

ದುಷ್ಟಮತಗಳನ್ನು ನಾಶಮಾಡುವುದರಲ್ಲಿ ಸಮರ್ಥರಾದ, ಶ್ರೇಷ್ಠರಾದ, ಬಾದರಾಯಣ ಎಂಬ ಹೆಸರನ್ನುಳ್ಳ, ಕಾಂತಿಯುಕ್ತರಾದ ವೇದವ್ಯಾಸರಿಗೆ ನಮಸ್ಕಾರ.

नमामि श्रीमदानन्दतीर्थाचार्यं परं गुरुम् ।
यस्य वाणीकृपाणीयं निकृन्तति भवाटवीम् ।।३।।

ಯಾರ ಮಾತುಗಳೆಂಬ ಖಡ್ಗವು ಸಂಸಾರವೆಂಬ ಕಾಡನ್ನೇ ನುಚ್ಚುನೂರು ಮಾಡುತ್ತದೋ ಅಂತಹ ಶ್ರೀಮದಾನಂದತೀರ್ಥರೆಂಬ ಉತ್ತಮಗುರುಗಳಾದ ಆಚಾರ್ಯರನ್ನು ಸಾಷ್ಟಾಂಗ ನಮಸ್ಕರಿಸುತ್ತೇನೆ.

प्रणम्य चरणाम्भोजे गुरूणां तत्कृपाबलात् ।
सन्यायविवृतिव्याख्यां करिष्यामि यथामति ॥४॥

ಗುರುಗಳಾದ ಅಕ್ಷೋಭ್ಯತೀರ್ಥರ ಪಾದಕಮಲಗಳಲ್ಲಿ ನಮಸ್ಕರಿಸಿ ಅವರ ಕೃಪೆಯ ಬಲದಿಂದ ನ್ಯಾಯವಿವರಣವೆಂಬ ಶ್ರೀಮದಾಚಾರ್ಯರ ಗ್ರಂಥಕ್ಕೆ ಬುದ್ಧಿಗೆ ನಿಲುಕಿದಷ್ಟು ವ್ಯಾಖ್ಯಾನ ಮಾಡುತ್ತೇನೆ.

चेतनाचेतनजगन्नियन्त्रेऽशेषसंविदे ।
नमो नारायणायाजशर्वशक्रादिवन्दित ॥१॥

ಎಲೈ ಪರಮಾತ್ಮನೇ! ನೀನು ಚತುರ್ಮುಖಬ್ರಹ್ಮರುದ್ರಇಂದ್ರಆದಿತ್ಯ ಮೊದಲಾದವರಿಂದ ವಂದ್ಯನಾಗಿದ್ದಿ. ಚೇತನಾಚೇತನಾತ್ಮಕವಾದ ಸಮಸ್ತ ಜಗತ್ತನ್ನು ನಿಯಮನ ಮಾಡುವ, ಸರ್ವಜ್ಞನಾದ, ನಾರಾಯಣನೆನಿಸಿಕೊಂಡ ನಿನಗೆ ಸಾಷ್ಟಾಂಗನಮಸ್ಕಾರ.

टीका – ग्रन्थारम्भे विघ्नविघातायाचार्यः समुचितविशिष्टेष्टदेवतां नारायणमुपश्लोकयति – चेतनेति ॥ जन्मादिसूत्रे यत् 'सकलजगज्जन्मादिहेतुत्वं सार्वज्ञ्याद्यशेषगुणवत्त्वं च' इति द्विविधं ब्रह्मलक्षणमभिप्रेतं तदाद्येन पदद्वयेन नारायणस्य सूचितम् । 'चेतना' इति सकलजगत्सङ्ग्रहार्थम् । तेन कथञ्चिज्जगदेकदेशनियमनवतां विरिञ्चादीनां व्युदासः । अत्र द्वितीयान्तस्य जगच्छब्दस्य तृन्नन्तेन नियन्तृशब्देन समासः। तेन जगन्नियमने नारायणस्य प्रयोजनसद्भावे प्राक्तदूनत्वादपूर्णता । अन्यथा तदेवायुक्तमित्येतदपि निरस्तम् । तृनस्ताच्छील्यार्थत्वात् । अशेषविषयत्वादशेषा संविद्यस्यासावशेषसंवित् । अनेनैव विशिष्टता चोपपादिता भवति । अजेत्यादिनेष्टदेवतात्वमुपपादयति । अजादयो हीश्वरा

**न कस्यापि वन्दारव इति केषाञ्चिदभिमानः । तन्निरासायैषां ग्रहणम् । आदिपदेनादित्यानां ग्रहणम् । अत एव समासार्थतया प्राप्तयोरपि शर्वशक्रयोः स्वरूपेणोपादानम् । नान्येषामिव मम परोक्षो नारायण इति ज्ञापनाय सम्बुद्ध्यन्त**೯೨೩ದು ಇದರ ಅರ್ಥ. ಚೇತನಾಚೇತನಜಗನ್ನಿಯಂತ್ರೇ; ಅಶೇಷಸಂವಿದೇ ಎಂಬೆರಡು ವಿಶೇಷಣಗಳಿಂದ ಸರ್ವೋತ್ಕೃಷ್ಟವು ತಿಳಿದು ವಿಶಿಷ್ಟನೆಂದು ಹೇಳಿದಂತಾಗುತ್ತದೆ. 'ಅಜ' ಇತ್ಯಾದಿ ವಿಶೇಷಣದಿಂದ ಇಷ್ಟದೇವತೆಯೆಂದು ಉಪಪಾದಿಸಿದ್ದಾರೆ. 'ಬ್ರಹ್ಮದೇವರು, ರುದ್ರದೇವರು ಇವರುಗಳನ್ನೇ ಸರ್ವೋತ್ತಮರು' ಎಂದು ಹೇಳುವ ಮತವನ್ನು ಈ ವಿಶೇಷಣದಿಂದ ನಿರಾಕರಿಸಿದ್ದಾರೆ. ಚತುರ್ಮುಖಾದಿಗಳು ಯಾರನ್ನೂ ನಮಸ್ಕರಿಸುವುದಿಲ್ಲವೆಂದು ಅವರ ವಾದ. ಆದರೆ ನಾರಾಯಣನಿಗೆ ಚತುರ್ಮುಖ, ರುದ್ರ, ಇಂದ್ರ ಮೊದಲಾದವರೆಲ್ಲರೂ ನಮಸ್ಕರಿಸುವುದರಿಂದ ಅವರ ಮತವು ಸರಿಯಲ್ಲವೆಂದು ತಿಳಿಸಿದ್ದಾರೆ. ಆದಿಪದದಿಂದ ಆದಿತ್ಯನನ್ನು ಸ್ವೀಕರಿಸಬೇಕು. ಪರವಾದಿಗಳನ್ನು ನಿರಾಕರಿಸುವ ವಿವಕ್ಷೆ ಆಚಾರ್ಯರಿಗೆ ಇಲ್ಲದಿದ್ದರೆ ಶರ್ವ, ಶಕ್ರ ಇತ್ಯಾದಿ ದೇವತೆಗಳ ಹೆಸರನ್ನು ಉಲ್ಲೇಖಿಸುವ ಅವಶ್ಯಕತೆ ಇರಲಿಲ್ಲ. ಕೇವಲ 'ಅಜಾದಿವಂದಿತ' ಎಂದಿಷ್ಟೇ ಸಾಕಿತ್ತು.

ಉಳಿದವರಂತೆ ನನಗೆ ನಾರಾಯಣನು ಪರೋಕ್ಷನಲ್ಲವೆಂದು ತಿಳಿಸಲು ಸಂಬುದ್ಧ್ಯಂತ ಪ್ರಯೋಗವನ್ನು ಮಾಡಿದ್ದಾರೆ. 'ತುಭ್ಯಮ್' ಎಂದು ಅಧ್ಯಾಹಾರ ಮಾಡಿಕೊಂಡು ಅನ್ವಯಿಸಬೇಕು.

ವಿವರಣೆ - 'ಕರ್ತೃಕರ್ಮಣೋಃ ಕೃತಿಃ' (೨/೩/೬೫) ಎಂಬ ಸೂತ್ರವು ಕೃತ್‌ಪ್ರತ್ಯಯ ಯೋಗವಿದ್ದಾಗ ಷಷ್ಠೀವಿಭಕ್ತಿಯನ್ನು ವಿಧಿಸಿದೆ. ಆದರೆ 'ನಲೋಕಾವ್ಯಯನಿಷ್ಠಖಲರ್ಥತೃನಾಮ್' ಎಂಬ ಸೂತ್ರವು ತೃನ್‌ಪ್ರತ್ಯಯಯೋಗವಿದ್ದಾಗ ಷಷ್ಠೀವಿಭಕ್ತಿಯನ್ನು ನಿಷೇಧಿಸಿದೆ. ಆದ್ದರಿಂದ ದ್ವಿತೀಯಾವಿಭಕ್ತಿಯನ್ನೇ ಹೇಳಿ; 'ಜಗಂತೀ ನಿಯಂತಾ ಜಗನ್ನಿಯಂತಾ' ಎಂದೇ ಹೇಳಬೇಕು. ಇಲ್ಲಿರುವ ತೃನ್‌ಪ್ರತ್ಯಯವು ಸ್ವಭಾವಾರ್ಥದಲ್ಲಿದೆ. 'ಆಕ್ವೇತಚ್ಛೀಲತದ್ಧರ್ಮತತ್ಸಾಧುಕಾರಿಷು' (೩/೩/೧೩೪) ಎಂಬ ಅಧಿಕಾರಸೂತ್ರದಲ್ಲಿ ತೃನ್' ಎಂಬ ಸೂತ್ರವು ಪ್ರಸಕ್ತವಾಗಿದೆ. ಈ ಸೂತ್ರದಲ್ಲಿ ತಾಚ್ಛೀಲ್ಯಾರ್ಥದಲ್ಲಿ ತೃನ್‌ಪ್ರತ್ಯಯವನ್ನು ವಿಧಿಸಲಾಗಿದೆ. ಆದ್ದರಿಂದ ಶೀಲಂ ಪ್ರಭಾವ ಎಂಬ ಅಮರಕೋಶದ ಮಾತಿನಂತೆ ನಿಯಂತುಂ

ಶೀಲಮಸ್ಯಾಸ್ತೀತಿ ಎಂಬ ವಿಗ್ರಹದಿಂದ ಜಗನ್ನಿಯಮನಾದಿಗಳನ್ನು ಭಗವಂತನ ಸ್ವಭಾವವೆಂದು ಹೇಳಬೇಕು. ಹೊರತು ಫಲಾಪೇಕ್ಷೆಯಿಂದ ಜಗತ್ತನ್ನು ನಿಯಮಿಸಲಾರ. ಫಲವೇ ಇಲ್ಲದಿದ್ದರೆ ನಿಯಮನಪ್ರವೃತ್ತಿ ಹೇಗೆ ಕೂಡುತ್ತದೆ? ಎಂದು ಪ್ರಶ್ನಿಸಬಾರದು. ಸ್ವಭಾವಪ್ರವೃತ್ತಿಗೆ ಫಲದ ಅಪೇಕ್ಷೆ ಇರುವುದಿಲ್ಲ. ಸುಡುವಿಕೆಯೆಂಬ ಸ್ವಭಾವವನ್ನು ಹೊಂದಿದ ಅಗ್ನಿಯು ಫಲಾಪೇಕ್ಷೆಯಿಂದ ಸುಡುವುದಿಲ್ಲ. ಆದ್ದರಿಂದ 'ದೇವಸ್ಯೇಷ ಸ್ವಭಾವೋಽಯಂ ಆಪ್ತಕಾಮಸ್ಯ ಕಾ ಸ್ಪೃಹಾ' ಎಂಬ ಮಾತಿನಂತೆ ಸೃಷ್ಟ್ಯಾದಿವ್ಯಾಪಾರಗಳಲ್ಲಿ ಭಗವಂತನು ಸ್ವಭಾವದಿಂದಷ್ಟೇ ಪ್ರವರ್ತಿಸುತ್ತಾನೆ.

**न्यायविवरणम् –**

**कृत्वा भाष्यानुभाष्येऽहमपि वेदार्थसत्पतेः ।**
**कृष्णस्य सूत्रानुव्याख्यासन्न्यायविवृतिं स्फुटम् ।।२।।**

**करोमि मन्दबुद्धीनां बुधानां चोपकारिकाम् ।**
**प्रीत्यै तस्यैव दैवस्य तत्प्रसादपुरःसरः ।।३।।**

ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಗಳನ್ನು ನಾನು ರಚಿಸಿರುತ್ತೇನೆ. ಆದರೂ ಸಹ ವೇದಾರ್ಥಗಳ ಪಾಲಕನಾದ ಶ್ರೀವೇದವ್ಯಾಸರ ಸೂತ್ರಗಳಿಗೆ ಅನುಸಾರಿಯಾದ ಸನ್ನ್ಯಾಯವಿವರಣೆಯೆಂಬ ವ್ಯಾಖ್ಯಾನವನ್ನು ಮಾಡಲು ಹೊರಟಿದ್ದೇನೆ. ಇದು ಮಂದಬುದ್ಧಿಗಳಿಗೂ ಮತ್ತು ಜ್ಞಾನಿಗಳಿಗೂ ಉಪಕಾರಿಯಾಗಿದೆ. ಭಗವಂತನ ಅನುಗ್ರಹದಿಂದ ಅವನ ಪ್ರೀತಿಗಾಗಿ ಇದನ್ನು ರಚಿಸುತ್ತಿದ್ದೇನೆ.

टीका – कृत्वा इत्यादिना श्लोकद्वयेन ग्रन्थारम्भं समथर्यते । तथा हि । सूत्रार्थग्रहणाय खल्वयमारम्भः । तच्च भाष्यानुव्याख्यानाभ्यामेव सिद्धमिति किमनेनेत्यत उक्तं 'भाष्यानुभाष्ये कृत्वापि सूत्रानुव्याख्यासन्न्यायविवृतिं करोमि' इति ।। सत्यं सूत्रार्थग्रहणाय भाष्यनुभाष्ये कृते तथाप्युव्याख्यायामुक्ता ये सन्न्यायास्तोषां विवृतिं 'विव्रियन्तेऽनया' इति तद्विवरणार्थं ग्रन्थं करोमीति । न्यायशब्देन पूर्वोत्तरपक्षयुक्तयोऽभिधीयन्ते । अत्र तासां प्रतिपादकानि वाक्यान्युपलक्ष्यन्ते । पूर्वपक्षन्यायानां सत्वं, सदलत्वं सूत्रप्रयोजकत्वमिति

यावत् । सिद्धान्तन्यायानां तु तत्वनिश्चयसामर्थ्यम् । अथवा सिद्धान्तयुक्तय एव सन्न्यायाः ।

न च तेषां विवरणमन्तरेण पूर्वपक्षन्यायविवरणं सुबोधमिति तेऽप्युपलक्षणीयाः । अत एव प्रायेण सिद्धान्तप्राधान्येनैव विवृतिर्वर्तिष्यते । 'लिङ्गं साधारणम्' इत्यादि विषयवाक्यविवरणं तु क्वचिदेवेति नोक्तम् । साध्यनिर्देशस्तु न्यायविवरणाङ्गमेवेति । न चैवं वाच्यं न सूत्राणामयङ्ग्रन्थ इति । परम्परया सूत्रार्थग्रहणोपायत्वादिति भावेन प्रसिद्धोऽप्यनुव्याख्यायाः सूत्रसम्बन्धो दर्शितः । एतच्च प्रारिप्सिताग्रन्थगौरवसम्पादनार्थम् ।

ननु सूत्राणामेव गौरवं कुतः । परमाप्तप्रणीतत्वादिति भावेनोक्तं – **कृष्णस्येति** ।। समासे गुणीभूतस्यापि सूत्रपदस्य बुद्ध्या विविक्तस्य भिन्नपदेन विशेषणं युज्यते ।

वेदार्थनिर्णयार्थत्वे श्रुतियुक्तिसम्पादितत्वाच्च गौरवं सूत्राणामिति भावेनोक्तं **वेदार्थसत्पतेरिति** । मुख्यपालकस्य । स्यादेतत् 'अथातो धर्मजिज्ञासा' इत्यादिनैव वेदार्थस्य निर्णीतत्वाद्गतार्थानि सूत्राणीत्यतो वा तदुक्तं **वेदार्थसत्पतेरिति** ।। ब्रह्मैव हि सर्ववेदानां मुख्योऽर्थः । तन्निर्णयाय चैतानि सूत्राणि भगवता कृतानीति भगवति वेदार्थसत्पतित्वम् । अन्ये तु पुनरेतन्न्यायोपजीवनेन वेदैकदेशामुख्यार्थकर्मादिनिर्णयाय सूत्राणि प्रणीतवन्ति इति ।

ननु सन्न्यायविवृतिं शिष्या एव करिष्यन्ति किमनेन स्वकृतग्रन्थविवणेनेत्यतः उक्तम् – **अहमिति** ।। अनेनान्येषामसामर्थ्यं सूचयति । 'ईदूदेदितिप्रगृह्यत्वे मणीवादीनां प्रतिषेध' इति वचनाद्भाष्यानुभाष्येऽहमिति प्रकृतिभावाभावः । यद्वा अनुव्याख्यायाः सन्न्यायाः भाष्यानुभाष्ययोरेव विवृताः । यथा भाष्ये 'सर्वज्ञा हि रुद्रादयः'

इत्यादिना । अनुभाष्ये च 'आप्तैः प्रत्यक्षतो दृष्ट्वा' इत्यादिना । किमनेनेत्यत उक्तं सूत्रानुव्याख्यासन्न्यायानां विवरणं भाष्यानुभाष्ये कृत्वाऽप्यत्र स्फुटीकरोमीति । सामीप्याद्वर्तमानव्यपदेशः । स्फुटत्वं च सर्वविषयत्वेनाक्षरार्थव्याख्यानेन चेत्यादि । किमनेन स्फुटीकरणेन, येनायं ग्रन्थः कर्तव्यः स्यादित्यत उक्तम् – **मन्दबुद्धिनामुपकारिकामिति** ।। न चैवं महाबुद्धीनामनुपादेयात तदपेक्षितस्याप्यत्राभावादिति भावेनोक्तम् – **बुधानां चेति** ।

अस्तु परेषामिदं प्रयोजनं स्व(स्य तु)कृतग्रन्थप्रवृत्तिरेव नेत्यत आह – **प्रीत्या इति** ।। संक्षेपविस्तराभ्यां स्वग्रन्थे विवृते सत्सु चोपकृतेषु सूत्रकृतो महती प्रीतिर्भवति । एतेनैतदपि निरस्तम् । आदौ दुर्गमार्थानि वाक्यानि विरच्य पुनस्तद्विवरणं, वृथा लवणं जग्ध्वा पुनः पानीयान्वेषणमनुसरतीति । **प्रीत्या एवेति** सम्बन्धः ।

न केवलं ग्रन्थनिर्माणफलं तत्प्रीतिरपि तु तत्कारणं चेत्याह – **तत्प्रसादेति** ।। तत्प्रसादः पुरःसर इव कारणं यस्य ग्रन्थं कुर्वतो मम सोऽहं तथोक्त इति ।। ३ ।।

'ಕೃತ್ವಾ' ಇತ್ಯಾದಿಯಾಗಿ ಎರಡು ಶ್ಲೋಕಗಳಿಂದ ಗ್ರಂಥಪ್ರತಿಜ್ಞೆಯನ್ನು ಮಾಡಿ, ಆರಂಭಣೀಯತ್ವವನ್ನು ಸಮರ್ಥಿಸುತ್ತಿದ್ದಾರೆ. ಅದು ಹೀಗೆ --

ಸೂತ್ರಗಳ ಅರ್ಥವನ್ನು ತಿಳಿಸುವುದಕ್ಕಾಗಿ ಈ ಗ್ರಂಥವು ಹೊರಟಿದೆ. ಆದರೆ ಬ್ರಹ್ಮಸೂತ್ರಭಾಷ್ಯ ಅನುವ್ಯಾಖ್ಯಾನಗಳಿಂದಲೇ ಈ ಪ್ರಯೋಜನವು ಲಾಭವಾಗುವಾಗ ಪುನಃ ಈ ಗ್ರಂಥದ ಕೃತ್ಯವೇನು? ಎಂಬ ಪ್ರಶ್ನೆಗೆ 'ಭಾಷ್ಯಾನುಭಾಷ್ಯೇ ಕೃತ್ವಾಽಪಿ ಸೂತ್ರಾನುವ್ಯಾಖ್ಯಾಸನ್ನ್ಯಾಯವಿವೃತಿಂ ಕರೋಮಿ' ಎಂದು ಉತ್ತರಿಸಿದ್ದಾರೆ. ಹೌದು, ಸೂತ್ರಗಳ ಅರ್ಥವನ್ನು ತಿಳಿಸುವುದಕ್ಕಾಗಿ ಬ್ರಹ್ಮಸೂತ್ರಭಾಷ್ಯ, ಅನುವ್ಯಾಖ್ಯಾನಗಳನ್ನು ರಚಿಸಿದ್ದಾಗಿದೆ. ಆದರೂ ಸಹ ಈ ಗ್ರಂಥವು ವ್ಯರ್ಥವಲ್ಲ. ಅನುವ್ಯಾಖ್ಯಾನದಲ್ಲಿ ಯಾವ

ಪೂರ್ವಪಕ್ಷನ್ಯಾಯ ಹಾಗೂ ಸಿದ್ಧಾಂತನ್ಯಾಯಗಳನ್ನು ಹೇಳಿದ್ದೇವೋ, ಅದನ್ನು ವಿವರಿಸುವುದಕ್ಕಾಗಿ ಈ ಗ್ರಂಥ ಹೊರಟಿದೆ.

ಶ್ಲೋಕದಲ್ಲಿರುವ ಸನ್ಯಾಯಶಬ್ದಕ್ಕೆ ಪೂರ್ವಪಕ್ಷಯುಕ್ತಿ ಹಾಗೂ ಸಿದ್ಧಾಂತಯುಕ್ತಿಗಳನ್ನು ವಿವಕ್ಷಿಸಬೇಕು. ಅವುಗಳನ್ನು ಪ್ರತಿಪಾದಿಸುವ ವಾಕ್ಯಗಳನ್ನೂ ಸಹ ಉಪಲಕ್ಷಣಯಾ ಸ್ವೀಕರಿಸಬೇಕು. ಸಿದ್ಧಾಂತಯುಕ್ತಿಗಳಂತೆ ಪೂರ್ವಪಕ್ಷಯುಕ್ತಿಗಳನ್ನು ಸನ್ಯಾಯ ಎಂದು ಹೇಳಿದ್ದು ತಪ್ಪಲ್ಲ. ಪೂರ್ವಪಕ್ಷಯುಕ್ತಿಗಳೂ ಸಹ ಸೂತ್ರಪ್ರಯೋಜಕವಾದ್ದರಿಂದ ಸನ್ಯಾಯಗಳೆನ್ನಿಸುತ್ತವೆ. ಸಿದ್ಧಾಂತಯುಕ್ತಿಗಳಂತೂ ತತ್ವನಿಶ್ಚಾಯಕವಾದ್ದರಿಂದ ಸನ್ಯಾಯ-ಗಳೆನ್ನಿಸುತ್ತವೆ. ಅಥವಾ ಕೇವಲ ಸಿದ್ಧಾಂತಯುಕ್ತಿಗಳನ್ನೇ ಸನ್ಯಾಯಪದದಿಂದ ಇಟ್ಟುಕೊಳ್ಳಬೇಕು.

ಸಿದ್ಧಾಂತಯುಕ್ತಿಗಳನ್ನು ವಿವರಣೆ ಮಾಡದಿದ್ದರೆ ಪೂರ್ವಪಕ್ಷನ್ಯಾಯಗಳೇ ಅರ್ಥವಾಗಲಾರವು. ಆದ್ದರಿಂದ ಉಪಲಕ್ಷಣಯಾ ಪೂರ್ವಪಕ್ಷನ್ಯಾಯಗಳನ್ನು ಇಟ್ಟುಕೊಳ್ಳಬೇಕು. ಆದ್ದರಿಂದಲೇ ಈ ಗ್ರಂಥದಲ್ಲಿ ಮುಂದೆ ಸಿದ್ಧಾಂತನ್ಯಾಯಗಳನ್ನೇ ಪ್ರಧಾನವಾಗಿ ವಿವರಿಸಿದ್ದಾರೆ.

ಮುಂದೆ ತೃತೀಯಪಾದದಲ್ಲಿ 'ಲಿಂಗಂ ಸಾಧಾರಣಮ್' ಇತ್ಯಾದಿಯಾಗಿ ಅಧಿಕರಣಗಳ ವಿಷಯವಾಕ್ಯವನ್ನು ವಿವರಿಸಿದ್ದಾರೆ. ಆದರೆ ಆ ವಿಷಯವಾಕ್ಯದ ಉದಾಹರಣೆ ಕೆಲವೆಡೆ ಮಾತ್ರ ಮಾಡಿರುವುದರಿಂದ ಇಲ್ಲಿ ಅದರ ಪ್ರಸಿದ್ಧಿಯನ್ನು ಮಾಡಿಲ್ಲ. ನ್ಯಾಯವನ್ನು ವಿವರಿಸುವಾಗ ಆ ನ್ಯಾಯಗಳಿಂದ ದೊರೆಯುವ ಫಲರೂಪವಾದ ಸಾಧ್ಯವನ್ನೂ ಸಹ ಮುಂದೆ ನಿರ್ದೇಶಿಸುತ್ತಾರೆ. ಅಂತಹ ಸಾಧ್ಯನಿರ್ದೇಶವು ನ್ಯಾಯವಿವರಣಕ್ಕೆ ಅದು ಅಂಗವೇ ಆಗಿದೆ.

ಕೇವಲ ನ್ಯಾಯಗಳನ್ನಷ್ಟೇ ಈ ಅಧಿಕರಣದಲ್ಲಿ ಉಲ್ಲೇಖಿಸುವುದಾದರೆ ಈ ಗ್ರಂಥವು ಸೂತ್ರವ್ಯಾಖ್ಯಾನವೆನಿಸುವುದಿಲ್ಲವಲ್ಲ? ಎಂದು ಪ್ರಶ್ನಿಸಬಾರದು. ಪರಂಪರಯಾ ಸೂತ್ರವನ್ನೇ ಈ ಗ್ರಂಥವು ವ್ಯಾಖ್ಯಾನಿಸುತ್ತಿದೆ. ಅನುವ್ಯಾಖ್ಯಾನವಂತೂ ಸೂತ್ರವನ್ನು ನೇರವಾಗಿ ವ್ಯಾಖ್ಯಾನಿಸುತ್ತದೆಂಬ ವಿಷಯದಲ್ಲಿ ವಿಪ್ರತಿಪತ್ತಿಯಿಲ್ಲ. ಅಂತಹ ಅನುವ್ಯಾಖ್ಯಾನದಲ್ಲಿ

ಹೇಳಲ್ಪಟ್ಟ ನ್ಯಾಯಗಳನ್ನೇ ಇಲ್ಲಿ ವಿವರಿಸುತ್ತಿರುವುದರಿಂದ ಪರಂಪರೆಯಾ ಈ ಗ್ರಂಥವೂ ಸಹ ಸೂತ್ರವ್ಯಾಖ್ಯಾನವೇ ಆಗುತ್ತದೆ. ಇದನ್ನು ತಿಳಿಸುವುದಕ್ಕಾಗಿಯೇ 'ಅನುವ್ಯಾಖ್ಯಾ-ಸನ್ನ್ಯಾಯವಿವೃತಿಂ' ಎಂಬಲ್ಲಿ ಅನುವ್ಯಾಖ್ಯಾ ಎಂಬ ಪದವನ್ನು ನಿರ್ದೇಶಿಸಿದ್ದಾರೆ. ಈ ಗ್ರಂಥವು ಸೂತ್ರವ್ಯಾಖ್ಯಾನವಾಗಿದೆಯೆಂದು ಏಕೆ ಹೇಳಬೇಕೆಂದರೆ ಪ್ರಾರಿಪ್ಸಿತವಾದ ಈ ಗ್ರಂಥದಲ್ಲಿ ಎಲ್ಲರಿಗೂ ಗೌರವ ಹುಟ್ಟಬೇಕು. ಸೂತ್ರವ್ಯಾಖ್ಯಾನವೆಂದು ಹೇಳಿದಾಗ ಸಹಜವಾಗಿ ಗೌರವಬುದ್ಧಿಯು ಉಂಟಾಗುತ್ತದೆ.

ಸೂತ್ರಗಳೆಂದ ಮಾತ್ರಕ್ಕೆ ಏಕೆ ಗೌರವಬುದ್ಧಿ ಹುಟ್ಟಬೇಕು? ಎಂದು ಪ್ರಶ್ನಿಸಿದರೆ ಸೂತ್ರವನ್ನು ರಚಿಸಿದವರು ಅತ್ಯಂತ ಆಪ್ತರಾದ ವೇದವ್ಯಾಸದೇವರು. ಆದಕ್ಕಾಗಿಯೇ 'ಕೃಷ್ಣಸ್ಯ' ಎಂಬ ಪದವನ್ನು ಹೇಳಿದ್ದಾರೆ. 'ಕೃಷ್ಣಸ್ಯ' ಎಂಬ ಪದಕ್ಕೆ ಸಮಾಸದಲ್ಲಿ ವಿಶೇಷಣವಾದ ಸೂತ್ರದಲ್ಲಿ ಅನ್ವಯಿಸಬೇಕು. ಸಮಾಸಅಘಟಿತವಾದ ಪದಾರ್ಥಕ್ಕೆ ಸಮಾಸಘಟಿತವಾದ ಪದಾರ್ಥದಲ್ಲಿ ಅನ್ವಯವು ಹೇಗೆ ಸಾಧ್ಯ? ಎಂಬ ಪ್ರಶ್ನೆಗೆ ಅವಕಾಶವಿಲ್ಲ. ಬುದ್ಧಿಯಿಂದ ಸೂತ್ರಪದವನ್ನು ಬೇರ್ಪಡಿಸಿದಾಗ ಭಿನ್ನಪದವಾಗುತ್ತದೆ. ಅಂತಹ ಸೂತ್ರದಲ್ಲಿ 'ಕೃಷ್ಣಸ್ಯ' ಎಂಬುದು ಅನ್ವಯ ಹೊಂದುತ್ತದೆ.

ವೇದಾರ್ಥಸತ್ತತೇಃ ಎಂಬುದನ್ನು ವೇದವ್ಯಾಸರಿಗೆ ವಿಶೇಷಣವನ್ನಾಗಿ ಹೇಳಿದ್ದಾರೆ. ಇದಕ್ಕೆ ಎರಡು ಪ್ರಯೋಜನ. ೧. ವೇದಗಳ ಅರ್ಥವನ್ನು ನಿರ್ಣಯಿಸುವುದಕ್ಕಾಗಿ ಶ್ರುತಿ ಹಾಗೂ ಯುಕ್ತಿಗಳನ್ನು ಹೇಳಿದ್ದರಿಂದ ಸೂತ್ರಗಳಲ್ಲಿ ಗೌರವಬುದ್ಧಿಯುಂಟಾಗುತ್ತದೆ. ೨. 'ಅಥಾತೋ ಧರ್ಮಜಿಜ್ಞಾಸಾ' ಇತ್ಯಾದಿ ಜೈಮಿನಿಸೂತ್ರಗ್ರಂಥದಿಂದಲೇ ವೇದಾರ್ಥವು ನಿರ್ಣಯ-ವಾಗಿರುವಾಗ ಬ್ರಹ್ಮಸೂತ್ರಗಳಿಗೆ ಗತಾರ್ಥತ್ವವು ಬರುತ್ತದಲ್ಲವೇ? ಎಂಬ ಶಂಕೆಯನ್ನು ಪರಿಹರಿಸಲು 'ವೇದಾರ್ಥಸತ್ತತೇಃ' ಎಂದು ಹೇಳಿದ್ದಾರೆ. ಬ್ರಹ್ಮನೇ ಸಕಲವೇದಗಳ ಮುಖ್ಯಾರ್ಥನು. ಇದನ್ನು ನಿರ್ಣಯಿಸುವುದಕ್ಕಾಗಿಯೇ ಈ ಸೂತ್ರಗಳು ವೇದವ್ಯಾಸದೇವರಿಂದ ರಚಿಸಲ್ಪಟ್ಟಿವೆ. ಹೀಗೆ ಬ್ರಹ್ಮನೇ ವೇದಗಳ ಮುಖ್ಯಾರ್ಥನೆಂದು ತಿಳಿಸಲು ವೇದಾರ್ಥಸತ್ತತಿಯೆಂದು ಹೇಳಿದ್ದಾರೆ. ಆದರೆ ಜೈಮಿನಿಮೊದಲಾದವರು ಬ್ರಹ್ಮಸೂತ್ರಗಳಲ್ಲಿ ಹೇಳಿದ ನ್ಯಾಯವನ್ನೇ ಉಪಜೀವಿಸಿ ವೇದದ ಏಕದೇಶವನ್ನಷ್ಟೇ

ಅಮುಖ್ಯವಾದ ಕರ್ಮಾದಿಪರವಾಗಿ ಸಮರ್ಥಿಸಿದ್ದಾರೆ. ಆದ್ದರಿಂದ ಬ್ರಹ್ಮಸೂತ್ರಕ್ಕೆ ಗತಾರ್ಥತ್ವವು ಬರುವುದಿಲ್ಲ.

ಪೂರ್ವಪಕ್ಷ ಹಾಗೂ ಸಿದ್ಧಾಂತನ್ಯಾಯಗಳ ಸಂಗ್ರಹವನ್ನು ಶಿಷ್ಯರೇ ಮಾಡಬಹುದು. ತಾವು ಮಾಡಿರುವ ಅನುವ್ಯಾಖ್ಯಾನಗ್ರಂಥಕ್ಕೆ ತಾವೇ ವ್ಯಾಖ್ಯಾನಿಸಿಕೊಳ್ಳುವ ಅವಶ್ಯಕತೆ ಏನಿದೆ? ಎಂಬ ಸಂಶಯವನ್ನು ಪರಿಹರಿಸಲು ಅಹಂ ಎಂದಿದ್ದಾರೆ. ಇದರಿಂದ ಬೇರೆಯವರಿಗೆ ನ್ಯಾಯಗಳನ್ನು ಸಂಗ್ರಹಿಸಲು ಸಾಧ್ಯವಿಲ್ಲವೆಂದು ಸೂಚಿಸಿದ್ದಾರೆ.

'ಭಾಷ್ಯಾನುಭಾಷ್ಯೇಹಂ' ಎಂದು ಒಟ್ಟಿಗೆ ಹೇಳಿದ್ದಾರೆ. ಇದು ಹೇಗೆ ಸರಿ? ಏಕೆಂದರೆ 'ಈದೂದೇದ್ವಿವಚನಂ ಪ್ರಗೃಹ್ಯಮ್' (೧/೧/೧೧) ಎಂಬ ಸೂತ್ರದಲ್ಲಿ ಈದಂತ, ಊದಂತ ಮತ್ತು ಏದಂತಶಬ್ದಗಳಿಗೆ ಪ್ರಗೃಹ್ಯಸಂಜ್ಞೆಯನ್ನು ಹೇಳಿದ್ದಾರೆ.

'ಭಾಷ್ಯಾನುಭಾಷ್ಯೇಹಂ' ಎಂದು ಒಟ್ಟಿಗೆ ಹೇಳಿದ್ದು ತಪ್ಪಲ್ಲ. 'ಈದೂದೇದ್ವಿವಚನಂ ಪ್ರಗೃಹ್ಯಮ್' ಎಂಬ ಸೂತ್ರದಿಂದ ಪ್ರಗೃಹ್ಯಸಂಜ್ಞೆ ಬಂದು ಪ್ರಕೃತಿಭಾವವು ಬರಬೇಕು. ಆದರೆ 'ಮಣೀವಾದೀನಾಂ ಪ್ರತಿಷೇಧಃ' ಎಂಬ ವಾರ್ತಿಕದಂತೆ ಪ್ರಗೃಹ್ಯಸಂಜ್ಞೆಯು ಅನಿತ್ಯವೆಂದು ತಿಳಿಯುತ್ತದೆ. ಆದ್ದರಿಂದ ಭಾಷ್ಯಾನುಭಾಷ್ಯೇ ಅಹಮ್ ಎಂದು ಬಿಡಿಸಿ ಹೇಳಬೇಕಾಗಿಲ್ಲ. ಅಥವಾ ಭಾಷ್ಯಾನುಭಾಷ್ಯ ಎಂಬುದು ದ್ವಿವಚನಾಂತಪದವೇ ಅಲ್ಲ. ಸಪ್ತಮ್ಯಂತ ಪದವಾಗಿದೆ. ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ಸನ್ನ್ಯಾಯಗಳನ್ನು ಭಾಷ್ಯ ಹಾಗೂ ಅನುವ್ಯಾಖ್ಯಾನಗಳಲ್ಲಿಯೇ ವಿವರಿಸಿದ್ದೇವೆ. 'ಸರ್ವಜ್ಞಾ ಹಿ ರುದ್ರಾದಯಃ' ಎಂದು ಭಾಷ್ಯದಲ್ಲಿ; 'ಆಪ್ತೈಃ ಪ್ರತ್ಯಕ್ಷತೋ ದೃಷ್ಟಾ' ಎಂಬ ಅನುವ್ಯಾಖ್ಯಾನದಲ್ಲಿ ಸನ್ನ್ಯಾಯಗಳನ್ನು ಹೇಳಿದ್ದು ಕಾಣಿಸುತ್ತದೆ. ಹಾಗಾದರೆ ಈ ಗ್ರಂಥವೇಕೆ? ಎಂಬ ಶಂಕೆಗೆ ಅವಕಾಶವಿಲ್ಲ. ಭಾಷ್ಯ ಅನುವ್ಯಾಖ್ಯಾನಗಳಲ್ಲಿ ಸನ್ನ್ಯಾಯಗಳನ್ನು ಹೇಳಿದ್ದರೂ ಈ ಗ್ರಂಥದಲ್ಲಿ ಸ್ಪಷ್ಟವಾಗಿ ಸಂಗ್ರಹಿಸಲಾಗಿದೆ. ಆದ್ದರಿಂದ ವ್ಯರ್ಥವಲ್ಲ.

ಭವಿಷ್ಯತ್‌ಕಾಲದಲ್ಲಿ ಸನ್ನ್ಯಾಯಗಳನ್ನು ಸಂಗ್ರಹಿಸುವುದಾದರೂ ಆ ಭವಿಷ್ಯತ್‌ಕಾಲದ ಸಾಮೀಪ್ಯ ವರ್ತಮಾನುಕಾಲಕ್ಕಿರುವುದರಿಂದ 'ಕರೋಮಿ' ಎಂಬ ವರ್ತಮಾನಪ್ರಯೋಗವು ತಪ್ಪಲ್ಲ. ಸ್ಪಷ್ಟತ್ವ ಎಂದರೆ ಎಲ್ಲಾ ನ್ಯಾಯಗಳನ್ನು ಮತ್ತು ಸೂತ್ರಗಳಲ್ಲಿ ಉಲ್ಲೇಖಿಸಿದ ಆ ನ್ಯಾಯಪದಗಳ ಅರ್ಥವನ್ನು ಹೇಳುವ ಮೂಲಕ ಸ್ಪಷ್ಟಪಡಿಸುತ್ತೇನೆ ಎಂದರ್ಥ. ಹೀಗೆ

ಸ್ಪಷ್ಟಪಡಿಸುವುದರಿಂದ ಏನು ಪ್ರಯೋಜನ? ಎಂಬ ಪ್ರಶ್ನೆಗೆ 'ಮಂದಬುದ್ಧೀನಾಂ ಉಪಕಾರಿಕಾಂ' ಎಂದಿದ್ದಾರೆ. ಹಾಗಾದರೆ ಬುದ್ಧಿವಂತರಿಗೆ ಈ ಗ್ರಂಥವು ಅನುಪಾದೇಯವಾಗುತ್ತದಲ್ಲವೇ? ಎಂಬ ಪ್ರಶ್ನೆಗೆ 'ಬುಧಾನಾಂ ಚ' ಎಂದು ಉತ್ತರಿಸಿದ್ದಾರೆ.

ಈ ಗ್ರಂಥದಿಂದ ಬೇರೆಯವರಿಗೆ ಪ್ರಯೋಜನವಿದ್ದರೂ, ತನಗೆ ಪ್ರಯೋಜನವಿಲ್ಲದ ಕಾರಣ ಏಕೆ ರಚಿಸಬೇಕು? ಎಂಬ ಪ್ರಶ್ನೆಗೆ 'ಪ್ರೀತ್ಯಾ' ಎಂಬ ಪದದಿಂದ ಉತ್ತರಿಸಿದ್ದಾರೆ. ಸಂಕ್ಷೇಪ ಹಾಗೂ ವಿಸ್ತಾರವಾಗಿ ತಮ್ಮ ಗ್ರಂಥವನ್ನು ವಿವರಿಸಿದಾಗ ಸಜ್ಜನರಿಗೆ ಉಪಕಾರ ಮಾಡಿದಂತಾಗಿ ಸೂತ್ರಕಾರರು ಪ್ರಸನ್ನರಾಗುತ್ತಾರೆ. ಹೀಗೆ ಹೇಳಿದ್ದರಿಂದ ಮತ್ತೊಂದು ಆಕ್ಷೇಪವೂ ನಿರಸ್ತವಾಯಿತು. 'ಮೊದಲು ವಾಕ್ಯಗಳನ್ನು ಕಠಿಣವಾಗಿ ರಚನೆ ಮಾಡಿ, ಪುನಃ ಅದನ್ನೇ ವಿವರಣೆ ಮಾಡಿದರೆ ವ್ಯರ್ಥವಾಗಿ ಉಪ್ಪನ್ನು ತಿಂದು ಪುನಃ ನೀರನ್ನು ಕುಡಿಯುವಂತಾಗುತ್ತದೆ' ಎಂಬ ಆಕ್ಷೇಪಕ್ಕೆ ಅವಕಾಶವಿಲ್ಲ. ಸಂಕ್ಷೇಪವಿಸ್ತಾರವಾಗಿ ಹೇಳಿದಾಗಲೇ ಬುಭುತ್ಸುಗಳಿಗೆ ಪ್ರವೃತ್ತಿ ಉಂಟಾಗಲು ಸಾಧ್ಯ.

**न्यायविवरणम् – जीवव्यतिरिक्तेश्वरस्याभावात्तस्य च स्वप्रकाशत्वान्न जिज्ञास्यतेति प्राप्ते 'अथातो ब्रह्मजिज्ञासा' इत्याह ।। 'तद्विजिज्ञासस्व तद्ब्रह्म' इति ब्रह्मशब्देन पूर्णगुणत्वोक्तेर्नानुभवसिद्धाल्पगुणजीवाभेदः । अथ कस्मादुच्यते ब्रह्मेति । 'बृहन्तो ह्यस्मिन् गुणाः' इति श्रुतेः ।।१।।**

ಅನುವಾದ -- "ಜೀವವ್ಯತಿರಿಕ್ತನಾದ ಈಶ್ವರನೇ ಇಲ್ಲ. ಅಂತಹ ಜೀವನು ಸ್ವಪ್ರಕಾಶನಾಗಿ ನಿತ್ಯಸಿದ್ಧನಾಗಿದ್ದಾನೆ. ಆದ್ದರಿಂದ ಈಶ್ವರನು ಜಿಜ್ಞಾಸ್ಯನಲ್ಲ" ಎಂದು ಪೂರ್ವಪಕ್ಷ. ಇದರ ನಿರಾಕರಣೆಗಾಗಿ 'ಅಥಾತೋ ಬ್ರಹ್ಮಜಿಜ್ಞಾಸಾ' ಎಂಬ ಸೂತ್ರವು ಹೊರಟಿದೆ. 'ತದ್ವಿಜಿಜ್ಞಾಸಸ್ವ ತದ್ಬ್ರಹ್ಮ' ಎಂಬಲ್ಲಿರುವ ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತಿರುವುದರಿಂದ ಅಲ್ಪಗುಣನಾದ ಜೀವನಿಂದ ಬ್ರಹ್ಮನಿಗೆ ಅಭೇದವನ್ನು ಹೇಳಲು ಸಾಧ್ಯವಿಲ್ಲ. 'ಅಥ ಕಸ್ಮಾದುಚ್ಯತೇ ಬ್ರಹ್ಮೇತಿ' ಎಂದು ಪ್ರಶ್ನಿಸಿದಾಗ 'ಬೃಹಂತೋ ಹ್ಯಸ್ಮಿನ್ ಗುಣಾಃ' ಎಂದು ಶ್ರುತಿಯು ಉತ್ತರಿಸಿದೆ. ಇದರಿಂದ ಬ್ರಹ್ಮಶಬ್ದವು ಗುಣಪೂರ್ಣತ್ವವನ್ನು ಹೇಳುತ್ತಿದೆ ಎಂದು ತಿಳಿಯುತ್ತದೆ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ನ್ಯಾಯವಿವರಣದ ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

टीका – एवं न्यायविवरणारम्भमुपपाद्येदानीं प्रथमाधिकरणपूर्व-पक्षन्यायं तावद्विवृणोति – जीवेति ।।

ಶ್ರೀ ಮಂತ್ರಾಲಯಪ್ರಭುವಿರಚಿತ - ಭಾವದೀಪ

ननु प्रथमद्वितीयपादयोर्युक्तिमालैव नास्ति । तत्कस्य विवरणमुच्यते । यद्यप्यत्र 'बाहुल्यं लिङ्गशब्दानां' इत्यादिवत् न न्यायाः सङ्ग्रहेणोक्ताः तथापि प्रत्यधिकरणं सिद्धान्तन्यायस्तावदुक्ता एव । पूर्वपक्षन्याया अपि क्वचिदुक्ताः क्वचिदनुमिताः सन्त्येवेति युक्तं विवरणम् । यद्यप्यत्र विषयप्रयोजनसम्बन्धा धिकारिणामनुपपत्त्या पूर्वपक्षः, तदुपपादनेन च सिद्धान्तः तथाप्युपलक्षणतया विषयनिराकरणसमर्थनयोरेव विवरणं क्रियते । एवमन्यत्रापि द्रष्टव्यम् । अत्र तावत् 'ओतत्वावाची' इत्यादिना सिद्धान्तन्यायोऽभिहितः । तेनानुमितश्चायं पूर्वपक्षन्यायोऽत्र विव्रियते । ईश्वरो हि विचारविषयतयाऽभिमतः । न चासौ जीवव्यतिरिक्तोऽस्ति प्रमाणाभावात् । प्रत्यक्षानुमानयोस्तद्विषयत्वानङ्गीकारात्। आगमस्य कार्यज्ञापकत्वात् । सिद्धज्ञापकत्वेऽपि तस्य जीवविषयत्वोपपत्तेरिति भावः । ततः किं स एव विचारविषयो भवत्वित्यत आह – तस्य चेति ।। उपलक्षणमेतत् । स्वप्रकाशज्ञाना-श्रयत्वेन मानसप्रत्यक्षेण वा निश्चितत्वादित्यपि द्रष्टव्यम् । जिज्ञास्यता विचारविषयता । सन्दिग्धो हि विचारस्य विषयो भवति । न हि निश्चिते संशयो युज्यते विरोधादिति । चः समुच्चये । समुच्चिताभ्यामेव द्वाभ्यां विषयाक्षेपसम्भवात् ।। एतन्निरासाय सूत्रमवतारयति – प्राप्त इति ।। तन्निरासार्थं सूत्रकार इति शेषः । अनुव्याख्यान्यायविवरणं प्रतिज्ञाय सूत्रोदाहरणसङ्गतमिति चेन्न, येऽनुव्याख्यायामुक्ता न्यायास्ते नोत्सूत्रिताः अपि तु सूत्र एवोक्तास्तदाक्षिप्ता अध्यायान्ते कृतया द्विरुक्त्या सूचिता एवेति ज्ञापनार्थत्वेन सङ्गतत्वात् ।

अत्र सूत्रे ब्रह्मशब्देन सूचितमनुव्याख्यया स एव ब्रह्मशब्दार्थ इति व्याख्यातं सिद्धान्तन्यायं विवृणोति – तद्विजिज्ञासस्वेति ।। कर्तव्यैव जिज्ञासा श्रुति- विहितत्वात् । न च विषयाभावः । ईश्वरस्य विचारविषयत्वात् । न च जीवव्यतिरिक्तेश्वरे प्रमाणाभावः । यतः

'तद्विजिज्ञासस्व' इति श्रुतिः जिज्ञासां विधाय 'तद्ब्रह्मे'ति जिज्ञास्ये ब्रह्मशब्दं प्रयुङ्क्ते । तेन ज्ञायते जीवातिरिक्तः परमेश्वरो विष्णुर्जिज्ञासा-विषयोऽस्तीति । कथम्? ब्रह्मशब्देन जिज्ञासाविषयस्य भगवतः पूर्णगुणत्वोक्तेः । जीवानां चाल्पगुणतया स्वस्यानुभवसिद्धत्वात् । न च पूर्णगुणोऽल्पगुणानतिरिक्त इति शक्यते वक्तुम्, विरोधात् । श्रुतेश्च सिद्धार्थत्वस्य सिद्धत्वात् ।

कुतो ब्रह्मशब्दस्य पूर्णगुणार्थत्वम्? इत्यत आह – **अथेति** ।। उच्यते विष्णुः । ततो जीवोऽस्तु निश्चितो मा वा भूत् । 'तद्ब्रह्म' इति वाक्येन जीवातिरिक्ततया प्रतीतस्य नानाविधविगानविषयतया सन्दिग्धप्रकारस्य वेदार्थस्य विष्णोर्मोक्षप्रयोजनजिज्ञासा मुमुक्षुणा कर्तव्येति सिद्धम् ।।

इदं सूत्रं शास्त्रव्यापारस्य विचारस्य कर्तव्यतासमर्थनद्वारेण शास्त्रस्यारम्भणीयतां प्रतिपादयदपि 'तद्विजिज्ञासस्व' इति वाक्यार्थ-विचारपरत्वात् वेदार्थमीमांसाशास्त्रान्तर्गतमपि भवतीति वेदितव्यम् । एतदर्थविचारणमेव चतुरध्याय्यां भविष्यतीति प्रायेण न्यायविवरणस्यैवात्र ग्रन्थे प्रक्रान्तत्वात् सङ्गत्यादिकमन्यतोऽवगन्तव्यम् ।।१।।

ಇಲ್ಲಿಯ ತನಕ ನ್ಯಾಯವಿವರಣಗ್ರಂಥಕ್ಕೆ ಆರಂಭಣೀಯತ್ವವನ್ನು ಸಮರ್ಥಿಸಿದ್ದಾಯಿತು. ಈಗ ಮೊದಲನೆಯ ಜಿಜ್ಞಾಸಾಧಿಕರಣದ ಪೂರ್ವಪಕ್ಷದ ನ್ಯಾಯವನ್ನು 'ಜೀವ' ಇತ್ಯಾದಿವಾಕ್ಯದಿಂದ ವಿವರಿಸುತ್ತಿದ್ದಾರೆ.

ಪ್ರಥಮ ಹಾಗೂ ದ್ವಿತೀಯಪಾದಗಳಲ್ಲಿ ನ್ಯಾಯಮಾಲೆಯನ್ನು ಹೇಳಿಯೇ ಇಲ್ಲ. ಅಲ್ಲಿ ಯಾವುದರ ವಿವರಣೆಯನ್ನು ಮಾಡುತ್ತೀರಿ? ಎಂದು ಪ್ರಶ್ನಿಸಬಾರದು. ವಸ್ತುತಃ 'ಬಾಹುಲ್ಯಂ ಲಿಂಗಶಬ್ದಾನಾಮ್' ಇತ್ಯಾದಿಯಾಗಿ ನ್ಯಾಯಗಳನ್ನು ಅಲ್ಲಿ ಸಂಗ್ರಹಿಸಿಲ್ಲ. ಆದರೂ ಸಹ ಪ್ರತಿಯೊಂದು ಅಧಿಕರಣಗಳ ಸಿದ್ಧಾಂತನ್ಯಾಯವನ್ನು ಸ್ಪಷ್ಟವಾಗಿ ಹೇಳಿದ್ದಾರೆ. ಕೆಲವೊಮ್ಮೆ

ಪೂರ್ವಪಕ್ಷನ್ಯಾಯಗಳನ್ನು ಹೇಳಿದ್ದಾರೆ. ಕೆಲವೊಮ್ಮೆ ಸೂಚಿಸಿದ್ದಾರೆ. ಆದ್ದರಿಂದ ಅಲ್ಲಿಯೂ ನ್ಯಾಯದ ವಿವರಣೆ ಇದ್ದೇ ಇದೆ.

ಈ ಅಧಿಕರಣದ ಪೂರ್ವಪಕ್ಷವನ್ನು ಕೇವಲ ವಿಷಯಾಭಾವದಿಂದಷ್ಟೇ ಇಲ್ಲಿ ಹೇಳಿದ್ದಾರೆ. ಆದರೆ ವಿಷಯ, ಪ್ರಯೋಜನ, ಸಂಬಂಧ, ಅಧಿಕಾರಿ ಈ ನಾಲ್ಕರ ಅನುಪಪತ್ತಿಯಿಂದಲೇ ಪೂರ್ವಪಕ್ಷ ಮಾಡಿ ಸಿದ್ಧಾಂತ ಮಾಡಬೇಕಲ್ಲವೆ? ಹೌದು, ಆದರೆ ವಿಷಯದ ನಿರಾಕರಣೆಯಿಂದ ಉಪಲಕ್ಷಣಯಾ ಪ್ರಯೋಜನಾದಿಗಳ ನಿರಾಕರಣೆಯನ್ನು ಇಟ್ಟುಕೊಳ್ಳಬೇಕು. ಇದರಂತೆ ಬೇರೆ ಅಧಿಕರಣಗಳಲ್ಲಿಯೂ ತಿಳಿಯಬೇಕು.

'ಓತತ್ವವಾಚಿ' ಇತ್ಯಾದಿಯಾಗಿ ಅನುವ್ಯಾಖ್ಯಾನದಲ್ಲಿ ಸಿದ್ಧಾಂತನ್ಯಾಯವನ್ನು ಹೇಳಿದ್ದಾರೆ. ಆದರಿಂದ ಅನುಮಿತವಾದ ಪೂರ್ವಪಕ್ಷನ್ಯಾಯವನ್ನು ಇಲ್ಲಿ ವಿವರಿಸಿದ್ದಾರೆ. ಈಶ್ವರನು ವಿಚಾರವಿಷಯನೆಂದು ಸಮ್ಮತನಾಗಿದ್ದಾನೆ. ಆದರೆ ಇಂತಹ ಈಶ್ವರನು ಜೀವನಿಗಿಂತ ಭಿನ್ನನಾಗಿದ್ದಾನೆನ್ನಲು ಪ್ರಮಾಣವಿಲ್ಲ. ಪ್ರತ್ಯಕ್ಷ, ಅನುಮಾನಗಳಿಗೆ ಅವನು ಗೋಚರನಲ್ಲ. ಆಗಮವು ಕೇವಲ ಕಾರ್ಯಬೋಧಕವಾಗಿದೆ. ಸಿದ್ಧಬೋಧಕವೆಂದು ಒಪ್ಪಿದರೂ ಸಿದ್ಧನಾದ ಜೀವನನ್ನೇ ಪ್ರತಿಪಾದಿಸುತ್ತದೆ ಹೊರತು ಬ್ರಹ್ಮನನ್ನು ಪ್ರತಿಪಾದಿಸಲಾರದು ಎಂದು ಜೀವವ್ಯತಿರಿಕ್ತ ಈಶ್ವರಸ್ಯಾಭಾವಾತ್ ಎಂಬ ಪದದ ಅಭಿಪ್ರಾಯ. ಹಾಗಾದರೆ ಜೀವನೇ ವಿಚಾರವಿಷಯನಾಗಲಿ? ಎಂಬ ಪ್ರಶ್ನೆಗೆ 'ತಸ್ಯ ಚ' ಎಂಬುದರಿಂದ ಉತ್ತರಿಸಿದ್ದಾರೆ. ಜೀವನು ಸ್ವಪ್ರಕಾಶತ್ವೇನ ನಿತ್ಯಸಿದ್ಧನಾಗಿದ್ದಾನೆಂದು ಆಚಾರ್ಯರು ಹೇಳಿದ್ದಾರೆ. ಉಪಲಕ್ಷಣಯಾ ಸ್ವಪ್ರಕಾಶಜ್ಞಾನಕ್ಕೆ ಆಶ್ರಯನಾದ್ದರಿಂದ ಮತ್ತು ಮಾನಸಪ್ರತ್ಯಕ್ಷದಿಂದಲೂ ನಿಶ್ಚಿತನಾಗಿದ್ದರಿಂದ ನಿತ್ಯಸಿದ್ಧನಾಗಿದ್ದಾನೆಂದು ತಿಳಿಯಬೇಕು. ಜಿಜ್ಞಾಸ್ಯತಾ ಎಂಬ ಪದಕ್ಕೆ 'ವಿಚಾರ-ವಿಷಯನಾಗಿದ್ದಾನೆ' ಎಂದರ್ಥ. 'ಸಂದಿಗ್ಧವಾದದ್ದಷ್ಟೇ ವಿಚಾರಕ್ಕೆ ವಿಷಯವಾಗುತ್ತದೆ. ನಿಶ್ಚಿತವಾದ್ದರಲ್ಲಿ ಸಂಶಯವು ಕೂಡುವುದಿಲ್ಲ. ಹಾಗಾದಲ್ಲಿ ವಿರೋಧ ಬರುತ್ತದೆ. ಸಮುಚ್ಚಯಾರ್ಥದಲ್ಲಿ ಚಕಾರವಿದೆ. ಜೀವವ್ಯತಿರಿಕ್ತವಾದ ಈಶ್ವರಾಭಾವ ಹಾಗೂ ಜೀವನ ನಿತ್ಯಸಿದ್ಧತ್ವವು ವಿಷಯವನ್ನು ಆಕ್ಷೇಪಿಸುತ್ತಿದೆ. ಇಷ್ಟು ಪೂರ್ವಪಕ್ಷ.

ಈ ಪೂರ್ವಪಕ್ಷವನ್ನು ನಿರಾಕರಿಸುವುದಕ್ಕಾಗಿ 'ಪ್ರಾಪ್ತೇ' ಎಂದು ನೇರವಾಗಿ ಸೂತ್ರವನ್ನೇ ಉಲ್ಲೇಖಿಸುತ್ತಿದ್ದಾರೆ. 'ಪ್ರಾಪ್ತೇ' ಎಂಬ ಪದದ ಅನಂತರ 'ಪೂರ್ವಪಕ್ಷದ ನಿರಾಸಕ್ಕೋಸ್ಕರ

ಸೂತ್ರಕಾರರು' ಎಂಬುದನ್ನು ಶೇಷಪೂರಣ ಮಾಡಬೇಕು. ಅನುವ್ಯಾಖ್ಯಾನದ ನ್ಯಾಯಗಳನ್ನು ವಿವರಿಸುತ್ತೇನೆಂದು ಪ್ರತಿಜ್ಞೆಗೈದು ಸೂತ್ರವನ್ನು ಉದಾಹರಿಸುವುದು ಅಸಂಗತವಲ್ಲವೇ? ಎಂದು ಶಂಕಿಸಬಾರದು. ಏಕೆಂದರೆ ''ಅನುವ್ಯಾಖ್ಯಾನದಲ್ಲಿ ಹೇಳಲ್ಪಟ್ಟ ನ್ಯಾಯಗಳು ಉತ್ಸೂತ್ರಿತಗಳಲ್ಲ. ಸೂತ್ರಕಾರರೇ ಆ ನ್ಯಾಯಗಳನ್ನು ಹೇಳಿದ್ದಾರೆ. ಕೆಲವೊಮ್ಮೆ ಸೂಚಿಸಿರುತ್ತಾರೆ'' ಎಂಬುದನ್ನು ತಿಳಿಸುವುದಕ್ಕಾಗಿ ಸೂತ್ರವನ್ನೇ ಇಲ್ಲಿ ಉಲ್ಲೇಖಿಸಿದ್ದಾರೆ.

ಸೂತ್ರದಲ್ಲಿರುವ 'ಬ್ರಹ್ಮ'ಶಬ್ದದಿಂದ ಯಾವ ಅರ್ಥವು ಸೂಚಿತವಾಗಿದೆಯೋ, ಅದೇ ಅರ್ಥವನ್ನೇ ಅನುವ್ಯಾಖ್ಯಾನದಲ್ಲಿ 'ಸ ಏವ ಬ್ರಹ್ಮಶಬ್ದಾರ್ಥಃ' ಎಂದು ವ್ಯಾಖ್ಯಾನಿಸಿದ್ದಾರೆ. ಅದರಿಂದ ತಿಳಿಯುವ ಸಿದ್ಧಾಂತನ್ಯಾಯವನ್ನು 'ತದ್ವಿಜಿಜ್ಞಾಸಸ್ವ' ಎಂದು ವಿವರಿಸಿದ್ದಾರೆ. ಶ್ರುತಿವಿಹಿತವಾದ್ದರಿಂದ ಬ್ರಹ್ಮಜಿಜ್ಞಾಸೆಯು ಕರ್ತವ್ಯವೇ ಆಗಿದೆ. ವಿಷಯವೇ ಇಲ್ಲವೆಂಬ ಗೊಂದಲ ಬೇಡ. ಈಶ್ವರನು ವಿಚಾರವಿಷಯನಾಗಿದ್ದಾನೆ. ಜೀವವ್ಯತಿರಿಕ್ತನಾದ ಈಶ್ವರನಿದ್ದಾನೆನ್ನಲು ಅನೇಕ ಪ್ರಮಾಣಗಳಿವೆ. 'ತದ್ವಿಜಿಜ್ಞಾಸಸ್ವ' ಎಂಬ ಶ್ರುತಿಯು ಜಿಜ್ಞಾಸೆಯನ್ನು ವಿಧಿಸಿ, 'ತದ್ಬ್ರಹ್ಮ' ಎಂದು ಬ್ರಹ್ಮಶಬ್ದವನ್ನು ಪ್ರಯೋಗಿಸಿದೆ. ಇದರಿಂದ ಜೀವವ್ಯತಿರಿಕ್ತನಾದ ಸರ್ವೋತ್ತಮನಾದ ವಿಷ್ಣುವು ಜಿಜ್ಞಾಸೆಗೆ ವಿಷಯನಾಗಿದ್ದಾನೆಂದು ತಿಳಿಯುತ್ತದೆ. ಏಕೆಂದರೆ ಬ್ರಹ್ಮಶಬ್ದವು ಜಿಜ್ಞಾಸಾವಿಷಯನಾದ ಭಗವಂತನಲ್ಲಿ ಗುಣಪೂರ್ಣತ್ವವನ್ನು ಹೇಳುತ್ತಿದೆ. ಆದರೆ ಜೀವನು ಅಲ್ಪಗುಣನೆಂದು ನಮ್ಮೆಲ್ಲರ ಅನುಭವ ಹೇಳುತ್ತಿದೆ. ಪೂರ್ಣಗುಣನಾದ ಭಗವಂತನಿಗೂ ಅಲ್ಪಗುಣನಾದ ಜೀವನಿಗೂ ಐಕ್ಯವನ್ನು ಹೇಳಿದರೆ ಪರಸ್ಪರವಿರೋಧ ಬರುತ್ತದೆ.

ಬ್ರಹ್ಮಶಬ್ದಕ್ಕೆ ಗುಣಪೂರ್ಣತ್ವವೆಂಬ ಅರ್ಥವನ್ನು ಹೇಗೆ ಹೇಳುತ್ತೀರಿ? ಎಂಬ ಪ್ರಶ್ನೆಗೆ 'ಅಥ' ಎಂದು ಉತ್ತರಿಸಿದ್ದಾರೆ. ಬ್ರಹ್ಮಶಬ್ದದಿಂದ ವಿಷ್ಣುವೇ ವಾಚ್ಯನಾಗಿದ್ದಾನೆ. ಜೀವನು ನಿಶ್ಚಿತನಾಗಲಿ, ಬಿಡಲಿ ಸಂದಿಗ್ಧನಾದ ವಿಷ್ಣುವು ಶಾಸ್ತ್ರಕ್ಕೆ ವಿಷಯನಾಗುತ್ತಾನೆ. 'ತದ್ಬ್ರಹ್ಮ' ಎಂಬ ವಾಕ್ಯದಿಂದ ಜೀವನಿಗಿಂತ ಅತಿರಿಕ್ತನಾಗಿ ಬ್ರಹ್ಮನು ಶ್ರುತನಾಗಿದ್ದಾನೆ. ಅನೇಕಪ್ರಕಾರಗಳಲ್ಲಿ ಈ ಬ್ರಹ್ಮನ ಬಗ್ಗೆ ಸಂದೇಹಗಳಿವೆ? ವೇದಾರ್ಥನಾದ ವಿಷ್ಣುವಿನ ಮೋಕ್ಷಪ್ರಯೋಜಕವಾದ ಜಿಜ್ಞಾಸೆಯು ಮುಮುಕ್ಷುವಿಗೆ ಕರ್ತವ್ಯವೇ ಆಗಿದೆ ಎಂದು ಸಿದ್ಧವಾಯಿತು.

ಈ ಸೂತ್ರವು ಶಾಸದ ವಿಚಾರಕರ್ತವ್ಯತ್ವವನ್ನು ಸಮರ್ಥಿಸುವ ಮೂಲಕ ಶಾಸ್ತ್ರಕ್ಕೆ ಆರಂಭಣೀಯತ್ವವನ್ನು ಸಮರ್ಥಿಸುತ್ತಿದೆ. ಆದರೂ ಸಹ 'ತದ್ವಿಜಿಜ್ಞಾಸಸ್ವ' ಎಂಬ

ಶ್ರುತ್ಯರ್ಥವನ್ನು ವಿಚಾರಮಾಡುತ್ತಿರುವುದರಿಂದ ವೇದಾರ್ಥಮೀಮಾಂಸಾಶಾಸ್ತ್ರದಲ್ಲಿ ಅಂತರ್ಭಾವ ಹೊಂದುತ್ತದೆಂದು ತಿಳಿಯಬೇಕು. ಇಂತಹ ಬ್ರಹ್ಮನ ವಿಚಾರಕ್ಕೋಸ್ಕರವೇ ನಾಲ್ಕು ಅಧ್ಯಾಯಗಳು ಹೊರಟಿರುವುದರಿಂದ ನ್ಯಾಯವಿವರಣವನ್ನು ಈ ಗ್ರಂಥದಲ್ಲಿ ಮಾಡುತ್ತಿದ್ದಾರೆ. ಆದ್ದರಿಂದ ಸಂಗತ್ಯಾದಿಗಳನ್ನು ಈ ಗ್ರಂಥದಲ್ಲಿ ಹೇಳಿಲ್ಲ. ಬೇರೆ ಗ್ರಂಥಗಳಿಂದಲೇ ಅವುಗಳನ್ನು ತಿಳಿಯಬೇಕು.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಜಿಜ್ಞಾಸಾಧಿಕರಣವು ಸಮಾಪ್ತವಾಯಿತು.

* * * * * *

**श्रीमदानन्दतीर्थभगवत्पादाचार्यविरचितम्**

# न्यायविवरणम्

**श्री जयतीर्थविरचिता**

# न्यायविवरणपञ्चिका

## जन्माधिकरणम् – १-१-२

**न्यायविवरणम् – न जीव एवाऽयं ब्रह्मशब्दः । ''यतो वा इमानि भूतानि जायन्ते'' इत्यादिना जन्मादिकारणत्वस्यैव ब्रह्मलक्षणत्वोक्तेः ।।२।।**

'ತದ್ ವಿಜಿಜ್ಞಾಸಸ್ವ ತದ್ ಬ್ರಹ್ಮ' ಎಂಬ ಶ್ರುತಿಯಲ್ಲಿರುವ ಬ್ರಹ್ಮಶಬ್ದದಿಂದ ಜೀವನು ಪ್ರತಿಪಾದ್ಯನೆಂದು ಹೇಳಬಾರದು. ಏಕೆಂದರೆ 'ಯತೋ ವಾ ಇಮಾನಿ ಭೂತಾನಿ ಜಾಯಂತೇ' (ಯಾವ ವಿಷ್ಣುವಿನಿಂದ ಬ್ರಹ್ಮರುದ್ರ ಮೊದಲಾದ ಸಮಸ್ತ ಜೀವರು ಹುಟ್ಟುತ್ತಾರೋ) ಎಂಬೀ ಶ್ರುತಿಗಳಿಂದ ಜಗಜ್ಜನ್ಮಾದಿಕಾರಣತ್ವವು ಬ್ರಹ್ಮನ ಲಕ್ಷಣವೆಂದು ಹೇಳಲಾಗಿದೆ. ಈ ಲಕ್ಷಣವು ಜೀವಾದಿಗಳಲ್ಲಿ ಸರ್ವಥಾ ಬರುವುದಿಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ನ್ಯಾಯವಿವರಣದ
ಕನ್ನಡಾನುವಾದದಲ್ಲಿ ಜನ್ಮಾಧಿಕರಣವು ಸಮಾಪ್ತವಾಯಿತು.

ಜನ್ಮಾಧಿಕರಣ (೧-೧-೨)

**न्यायविवरणटीका** – ।। जन्माद्यस्य यतः ।। अत्र पूर्वपक्षन्यायं सूचयन् प्रतिषेधति – **नेति** ।। जीव इति प्रथमान्तं सप्तम्यन्तं वा । आद्ये, ब्रह्मेति शब्दो यस्य असौ ब्रह्मशब्दः । द्वितीये, विषयसप्तमीयम् । ब्रह्मेति शब्दो ब्रह्मशब्दः । अयमिति ''तद् ब्रह्म'' इति श्रौतः ।

ಈ ಅಧಿಕರಣದ ಪೂರ್ವಪಕ್ಷನ್ಯಾಯವನ್ನು ತಿಳಿಸುತ್ತಾ ನಿರಾಕರಿಸುತ್ತಿದ್ದಾರೆ. ''ನ ಜೀವ'' ಇತ್ಯಾದಿಯಾಗಿ. ಮೂಲದಲ್ಲಿರುವ 'ಜೀವ' ಎಂಬುದನ್ನು 'ಜೀವಃ' ಎಂದು ಪ್ರಥಮಾಂತವಾಗಿ ಅಥವಾ 'ಜೀವೇ' ಎಂಬ ಸಪ್ತಮ್ಯಂತವಾಗಿ ಯೋಜಿಸಬಹುದು. ಪ್ರಥಮಾಂತಪದ ಎಂದು ವಿವಕ್ಷಿಸಿದಾಗ 'ಬ್ರಹ್ಮೇತಿ ಶಬ್ದೋ ಯಸ್ಯಾಸೌ ಬ್ರಹ್ಮಶಬ್ದಃ' ಎಂದು 'ಬ್ರಹ್ಮಶಬ್ದವುಳ್ಳವನು' ಎಂಬರ್ಥವನ್ನು ಹೇಳಿದಂತೆ ಆಗುತ್ತದೆ. ಸಪ್ತಮ್ಯಂತವಾಗಿ ವಿವಕ್ಷಿಸಿದಾಗ 'ಜೀವನೆಂಬ ವಿಷಯದಲ್ಲಿ' ಎಂಬುದಾಗಿ ವಿಷಯಸಪ್ತಮೀ ಎಂದು ತಿಳಿಯಬೇಕು. ಈ ಪಕ್ಷದಲ್ಲಿ 'ಬ್ರಹ್ಮ ಇತಿ ಶಬ್ದಃ = ಬ್ರಹ್ಮಶಬ್ದಃ' ಎಂದು ವಿಗ್ರಹ. 'ಅಯಮ್' ಎಂದರೆ 'ತದ್ ಬ್ರಹ್ಮ ಎಂಬ ಶ್ರುತಿಯಲ್ಲಿರುವ' ಎಂದರ್ಥ.

**अयं भावः – ब्रह्मशब्दस्तावत् जाति-जीव-कमलासन-शब्दराशिषु प्रसिद्धः । तत्र, जातिपरत्वं नोपपद्यते । तस्याः सुप्रसिद्धत्वेन ''तद्विजिज्ञासस्व'' इति जिज्ञास्यताऽनुपपत्तेः । अत एव न शब्दराशिपरता। प्रामाण्यादिजिज्ञासा च लोकत एव सिद्धा । नापि कमलासनपरत्वं; तज्जिज्ञासाया निष्प्रयोजनत्वात् । अतः परिशेषात् जीव एवाऽयं ब्रह्मशब्दः।**

ಅಭಿಪ್ರಾಯ ಹೀಗಿದೆ – ಜಾತಿ, ಜೀವ, ಚತುರ್ಮುಖಬ್ರಹ್ಮ, ಶಬ್ದರಾಶಿ ಇಷ್ಟು ಅರ್ಥಗಳಲ್ಲಿ ಬ್ರಹ್ಮಶಬ್ದವಿದೆ. ಇವುಗಳಲ್ಲಿ ಜಾತಿ ಎಂಬ ಅರ್ಥವು ಕೂಡುವುದಿಲ್ಲ. ಜಾತಿಯ ಬಗ್ಗೆ ಎಲ್ಲರಿಗೂ ಜ್ಞಾನವಿರುವುದರಿಂದ 'ತದ್ ವಿಜಿಜ್ಞಾಸಸ್ವ' ಎಂದು ಜಿಜ್ಞಾಸೆಯು ಅನುಪಪನ್ನವಾಗುತ್ತದೆ. ಈ ಕಾರಣದಿಂದಲೇ ಶಬ್ದರಾಶಿಯೆಂಬರ್ಥವೂ ತಪ್ಪಾಗುತ್ತದೆ. ಇನ್ನು ಜಾತಿ ಶಬ್ದರಾಶಿ ಇವುಗಳ ಪ್ರಾಮಾಣ್ಯವಿಷಯದಲ್ಲಿ ಜಿಜ್ಞಾಸೆಯೆಂದು ಹೇಳಬೇಕು. ಆದರೆ ಇದೂ ಸಹ ಲೋಕದಿಂದಲೇ ಸಿದ್ಧವಾಗಿದೆ. ಚತುರ್ಮುಖಬ್ರಹ್ಮ ಎಂಬರ್ಥವೂ ತಪ್ಪು.

ಅವನ ಜಿಜ್ಞಾಸೆಯಿಂದ ಯಾವ ಪ್ರಯೋಜನವೂ ದೊರೆಯುವುದಿಲ್ಲ. ಆದ್ದರಿಂದ ಕೊನೆಗೆ ಉಳಿದವನಾದ ಜೀವನೇ ಪರಿಶೇಷಪ್ರಮಾಣದಿಂದ ಬ್ರಹ್ಮಶಬ್ದಪ್ರತಿಪಾದಿತನಾಗಿದ್ದಾನೆ.

**ननु सोऽपि प्रसिद्ध एव । मैवं । देहादिविविक्ततयाऽप्रसिद्धत्वात् । विष्णौ तत्प्रयोगस्तु यौगिक एवेति । यद्वा, जीव एवेति जात्यादेरप्युपलक्षणम्। एवशब्दस्तु, भगवन्तं व्यावर्तयति । अयमभिप्रायः । जात्यादयो हि स्वरूपतो ब्रह्मशब्दवाच्यतया च प्रमिताः । केवलमन्यतमस्य तात्पर्यगोचरत्वं कल्प्यम् । अलौकिके विष्णौ सर्वमपि कल्पनीयम् ।**

ಇಂತಹ ಜೀವನು ಕೂಡ ಅಹಂ ಎಂದು ಪ್ರಸಿದ್ಧನಾಗಿದ್ದಾನೆನ್ನಬಾರದು. ದೇಹಭಿನ್ನನಾಗಿ ಜೀವನಿದ್ದಾನೆ ಎಂಬ ವಿಷಯದಲ್ಲಿ ಅಪ್ರಸಿದ್ಧನೇ ಆಗಿದ್ದಾನೆ. ವಿಷ್ಣುವಿನಲ್ಲಿ ಬ್ರಹ್ಮಶಬ್ದದ ಪ್ರಯೋಗವನ್ನು ಯೋಗವೃತ್ತಿಯಿಂದಲೇ ಹೇಳಬೇಕು. ಅಥವಾ ನ್ಯಾಯವಿವರಣದಲ್ಲಿರುವ 'ಜೀವ ಏವ' ಎಂಬ ಪದದಿಂದ ಜಾತ್ಯಾದಿಗಳನ್ನು ಉಪಲಕ್ಷಣಯಾ ಇಟ್ಟುಕೊಳ್ಳಬೇಕು. 'ಏವ'ಶಬ್ದವು ವಿಷ್ಣುವನ್ನು ವ್ಯಾವೃತ್ತಿಮಾಡುತ್ತಿದೆ. ಈ ಪಕ್ಷದಲ್ಲಿ ವಾಕ್ಯದ ಅಭಿಪ್ರಾಯ ಹೀಗಿದೆ – ಸ್ವಾಭಾವಿಕವಾಗಿ ಜಾತಿ ಮೊದಲಾದವುಗಳು ಬ್ರಹ್ಮಶಬ್ದವಾಚ್ಯಗಳೆಂದು ಪ್ರಮಿತವಾಗಿವೆ. ಇವುಗಳಲ್ಲಿ ಒಂದಕ್ಕೆ ಮಾತ್ರ ತಾತ್ಪರ್ಯಗೋಚರತ್ವವನ್ನು ಕಲ್ಪಿಸಬೇಕು. ಹೊರತು ಬ್ರಹ್ಮಶಬ್ದವಾಚ್ಯತ್ವವನ್ನು ಕಲ್ಪಿಸಬೇಕಾಗಿಲ್ಲ. ಆದರೆ ಲೋಕವ್ಯವಹಾರದಿಂದ ಸಿದ್ಧನಾಗದ ವಿಷ್ಣುವಿನಲ್ಲಿ ಬ್ರಹ್ಮಶಬ್ದವಾಚ್ಯತ್ವ ಮತ್ತು ತಾತ್ಪರ್ಯಗೋಚರತ್ವ ಎರಡನ್ನೂ ಕಲ್ಪಿಸಬೇಕು.

तथा च जात्यादेः प्रसिद्धत्वान्निष्प्रयोजनत्वात् 'तद् विजिज्ञासस्व' इति श्रुतिरनुपपन्नार्थेति कुतो नेत्येतत् सूत्रोक्तमनुव्याख्यायां सूत्रव्याख्यानेनैव व्याख्यातं न्यायं विवृणोति – यत इति ।। जन्मादिकारणत्वस्येति सकलजगज्जन्मादिनिमित्तत्वस्येत्यर्थः । 'एव'शब्देन 'जीवादावसम्भावितः' इति सूचयति । 'जिज्ञास्यब्रह्मणः श्रुत्योक्तं लक्षणमेव, प्रसिद्धान्यपि जीवादीनि त्याजयिष्यति, ग्राहयिष्यति चाऽप्रसिद्धम्' इति भावः ।।२।।

ಇಂತಹ ಜಾತಿ ಮೊದಲಾದವುಗಳು ಪ್ರಸಿದ್ಧವಾದ್ದರಿಂದ ಮತ್ತು ಅವುಗಳ ಜಿಜ್ಞಾಸೆಯ ಪ್ರಯೋಜನವೂ ಇಲ್ಲದ್ದರಿಂದ 'ತದ್ ವಿಜಿಜ್ಞಾಸಸ್ವ' ಎಂಬ ಶ್ರುತಿಯು ಅನುಪಪನ್ನವಾಯಿತು. ಹೇಗೆಂಬುದನ್ನು ಅನುವ್ಯಾಖ್ಯಾನದಲ್ಲಿ ಹೇಳಿದ ನ್ಯಾಯದಿಂದ ವಿವರಿಸುತ್ತಿದ್ದಾರೆ. ಸೂತ್ರವ್ಯಾಖ್ಯಾನದಿಂದಲೇ ತಿಳಿಯುವ ನ್ಯಾಯವನ್ನು ಯತಃ'' ಎಂಬುದಾಗಿ ವಿವರಿಸುತ್ತಿದ್ದಾರೆ. 'ಜನ್ಮಾದಿಕಾರಣತ್ವಸ್ಯ' ಎಂದರೆ 'ಸಕಲಜಗತ್ತಿನ ಜನ್ಮಾದಿಗಳಿಗೆ ನಿಮಿತ್ತಕಾರಣನು' ಎಂಬರ್ಥವನ್ನು ತಿಳಿಯಬೇಕು. 'ಏವ'ಶಬ್ದದಿಂದ ಈ ಲಕ್ಷಣವು ಜೀವಾದಿಗಳಲ್ಲಿ ಅಸಂಭಾವಿತಗಳೆಂದು ಸೂಚಿಸಿದ್ದಾರೆ. ''ಶ್ರುತಿಯಲ್ಲಿ ಹೇಳಲ್ಪಟ್ಟ ಜಿಜ್ಞಾಸ್ಯ ಬ್ರಹ್ಮನ ಲಕ್ಷಣವೇ ಪ್ರಸಿದ್ಧಾರ್ಥವಾದ ಜೀವಾದಿಗಳೆಂಬ ಅರ್ಥವನ್ನು ನಿರಾಕರಿಸುತ್ತದೆ, ಅಪ್ರಸಿದ್ಧವಾದ ವಿಷ್ಣುವೆಂಬ ಅರ್ಥವನ್ನು ಸ್ವೀಕರಿಸುತ್ತದೆ'' ಎಂದು ಅಭಿಪ್ರಾಯ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಜನ್ಮಾಧಿಕರಣವು ಸಮಾಪ್ತವಾಯಿತು.

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

## शास्त्रयोनित्वाधिकरणम् – १-१-३

**न्यायविवरणम् – न च रुद्रादौ सममेतल्लक्षणम् । शास्त्रैकसमधिगम्यत्वात् कारणस्य ।**

ಜಗಜ್ಜನ್ಮಾದಿ ಕಾರಣತ್ವವೆಂಬ ಬ್ರಹ್ಮನ ಲಕ್ಷಣವು ರುದ್ರಮೊದಲಾದ ಜೀವವಿಶೇಷರಲ್ಲಿಯೂ ಪಾಶುಪತಾದ್ಯಾಗಮಗಳ ಆಧಾರದಿಂದ ಸಾಧಾರಣವಾಗಿದೆ. ಹೀಗೆ

ಬ್ರಹ್ಮನ ಲಕ್ಷಣಕ್ಕೆ ಅತಿವ್ಯಾಪ್ತಿ ಬರುತ್ತದೆಂದು ಹೇಳಬಾರದು. ಋಗ್ವೇದ ಮೊದಲಾದ ಸಚ್ಛಾಸ್ತ್ರಗಳಿಂದಷ್ಟೇ ಜಗತ್ಕಾರಣನನ್ನು ತಿಳಿಯಬೇಕು. ಆವಾಗ ವಿಷ್ಣುವಿನ ಲಕ್ಷಣಕ್ಕೆ ಅತಿವ್ಯಾಪ್ತಿ ಮೊದಲಾದ ದೋಷಗಳು ಬರುವುದಿಲ್ಲ.

ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯರಿಂದ ರಚಿತವಾದ ನ್ಯಾಯವಿವರಣದ ಕನ್ನಡಾನುವಾದದಲ್ಲಿ ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು.

**न्यायविवरणटीका** – शास्त्रयोनित्वात् ।। **रुद्रादाविति** ।। उत्तरोत्तरशङ्का-निराससमुच्चितस्यैव पूर्वपूर्वोक्तार्थाभिमतसिध्यङ्गत्वात्, सर्वत्र समुच्चये चशब्दः । रुद्रादौ, जीवविशेष शैवाद्यागमेनेत्यादिनोक्तरीत्याऽनुमानेनेति शेषः । समं, साधारणम् । लक्षणं, लक्षणतयोक्तम् ।

ಮುಂದಿನ ಮುಂದಿನ ಶಂಕೆಗಳನ್ನು ಪರಿಹರಿಸುವುದರಿಂದ ಹಿಂದಿನ ಪ್ರಮೇಯವು ನಿರ್ಣಯವಾಗುತ್ತದೆ. ಆದ್ದರಿಂದ ಮುಂದಿನ ಶಂಕೆಯ ಪರಿಹಾರವನ್ನು ಸಮುಚ್ಚಯ ಮಾಡುವುದಕ್ಕಾಗಿ 'ನಚ' ಎಂಬುದಾಗಿ 'ಚ'ಶಬ್ದವನ್ನು ಹೇಳಿದ್ದಾರೆ. 'ರುದ್ರಾದೌ' ಎಂದರೆ ರುದ್ರ ಮೊದಲಾದ ಜೀವವಿಶೇಷರಲ್ಲಿ ಎಂದರ್ಥ. 'ಶೈವಾದ್ಯಾಗಮಸಂಪ್ರಾಪ್ತ' ಇತ್ಯಾದಿಯಾಗಿ ಹಿಂದೆ ಹೇಳಿದಂತೆ ಅನುಮಾನದಿಂದ ರುದ್ರಾದಿಗಳಲ್ಲಿಯೂ ಜಗತ್ಕಾರಣತ್ವವು ತಿಳಿಯುತ್ತಿದೆಯೆಂದು ಶೇಷಪೂರಣಮಾಡಿಕೊಳ್ಳಬೇಕು. 'ಸಮಂ' ಎಂಬ ಪದಕ್ಕೆ ಸಾಧಾರಣವಾಗಿದೆ ಎಂದರ್ಥ. 'ಲಕ್ಷಣಮ್' ಎಂಬ ಪದಕ್ಕೆ 'ಲಕ್ಷಣವೆಂದು ಹೇಳಲ್ಪಟ್ಟ' ಎಂದರ್ಥ.

यद्वा, सह मानेन, अनुमानेन वर्तत इति समम् । तथा च अतिव्यापकमित्यापाततः । वस्तुतस्तु, जीवविशेषेऽसम्भवान्नाऽलौकिकं कल्पयितुमलमिति । यदि च रुद्राद्येव विष्णुः, तदा तस्य सुप्रसिद्धत्वादिना न जिज्ञास्यत्वमिति ।।

ಅಥವಾ, 'ಸಹಮಾನೇನ ವರ್ತತೇ ಇತಿ ಸಮಮ್' ಎಂದು ವಿಗ್ರಹಮಾಡಿದಾಗ 'ಸಮಂ' ಎಂಬ ಪದಕ್ಕೆ ಅನುಮಾನದಿಂದ ಸಹಿತವಾದದ್ದು' ಎಂದರ್ಥ. ಆದ್ದರಿಂದ

ವಿಷ್ಣುವಿನ ಲಕ್ಷಣಕ್ಕೆ ಅತಿವ್ಯಾಪ್ತಿಯು ಬರುತ್ತದೆ. ಇದನ್ನು ಆಪಾತತಃ ಹೇಳಿದ್ದು; ವಸ್ತುತಸ್ತು ಜೀವವಿಶೇಷನಲ್ಲಿ ಬ್ರಹ್ಮನ ಲಕ್ಷಣವು ಸರ್ವಥಾ ಕೂಡದ ಕಾರಣ ಅಲೌಕಿಕವಾದದ್ದನ್ನು ಕಲ್ಪಿಸಬಾರದು. ಒಂದು ವೇಳೆ ರುದ್ರಾದಿಗಳೇ ವಿಷ್ಣುವಾದರೆ ಅಂತಹ ರುದ್ರಾದಿಗಳು ಸುಪ್ರಸಿದ್ಧರಾದ್ದರಿಂದ ಜಿಜ್ಞಾಸೆಯು ಕೂಡುವುದಿಲ್ಲ.

**शास्त्रेति** ।। शास्त्रं, वेदाऽऽदिकम् । शास्त्रं च तदेकमसहायं चेति शास्त्रैकम् । विशेषणविशेष्यभावस्य कामचारित्वात् । संख्यावचनस्यैवैक-शब्दस्य ''पूर्वकालैके''ति समासनिषेधनात् । कारणत्वस्य, सकलजगज्जन्म ाऽऽदिनिमित्तत्वस्य ।

'ಶಾಸ್ತ್ರ'ಶಬ್ದಕ್ಕೆ ಋಗಾದಿವೇದಗಳು ಎಂದರ್ಥ. 'ಶಾಸ್ತ್ರಂ ಚ ತತ್ ಏಕಂ ಚ' ಶಾಸ್ತ್ರೈಕಂ ಎಂದು ಸಮಾಸ ಮಾಡಬೇಕು. 'ಏಕ' ಶಬ್ದಕ್ಕೆ ಸಹಾಯವಿಲ್ಲದ್ದು ಎಂದರ್ಥ. ವಸ್ತುತಃ 'ಪೂರ್ವಕಾಲೈಕ' ಎಂಬ ಸೂತ್ರದಂತೆ ಏಕಶಬ್ದವು ಮೊದಲು ಬಂದು ಶಾಸ್ತ್ರಶಬ್ದವು ಅನಂತರ ಬರಬೇಕು. ಆದರೆ ಇಲ್ಲಿರುವ ಏಕಶಬ್ದವು ಸಂಖ್ಯಾರ್ಥಕದಲ್ಲಿಲ್ಲದ ಕಾರಣ ವಿಶೇಷಣ ವಿಶೇಷ್ಯಭಾವವನ್ನು ಯಥೇಚ್ಛವಾಗಿ ಪ್ರಯೋಗಿಸಬಹುದು. 'ಕಾರಣತ್ವಸ್ಯ' = ಸಕಲಜಗಜ್ಜನ್ಮಾದಿನಿಮಿತ್ತಕಾರಣಕ್ಕೆ ಎಂದರ್ಥ.

अनुमानं खलु, रुद्रादिकं पक्षीकृत्य वा, कारणत्वाऽऽश्रयत्वं तस्य कारणत्वं वा पक्षीकृत्य, तस्य रुद्रादिनिष्ठत्वं साधयति । उभयथा, जगत्कारणत्वप्रसिध्या भाव्यम् । अन्यथा, प्रसिद्धविशेषणत्वाऽऽश्रयाऽसिध्योः प्राप्तेः । कुतस्तत्प्रसिद्धिः । अनुमानादितिचेन्न । अनुमानस्य प्रतिपक्षादिदुष्टतया, शास्त्रैकसमधिगम्यत्वात् कारणत्वस्य । अत एव, रीत्यन्तरेणाऽनुमानमपि रुद्राऽदेर्जगत्कारणत्वे निरस्तम् ।

ಅನುಮಾನವು ರುದ್ರನನ್ನು ಪಕ್ಷವನ್ನಾಗಿಸಿ ಜಗತ್ಕಾರಣಕ್ಕೆ ಆಶ್ರಯನಾಗಿದ್ದಾನೆಂದು ಸಮರ್ಥಿಸುತ್ತದೆ. ಅಥವಾ ಜಗತ್ಕಾರಣತ್ವವನ್ನು ಪಕ್ಷವನ್ನಾಗಿ ಮಾಡಿ ಅದರಲ್ಲಿ ರುದ್ರಾದಿನಿಷ್ಠತ್ವವನ್ನು ಸಾಧಿಸುತ್ತದೆ. ಎರಡೂ ಬಗೆಯಲ್ಲಿ ಜಗತ್ಕಾರಣತ್ವವು ರುದ್ರನಲ್ಲಿ

ಬರುತ್ತದೆಂದು ತಿಳಿಯಬೇಕು. ಇಲ್ಲದಿದ್ದರೆ ಅಪ್ರಸಿದ್ಧವಿಶೇಷಣತ್ವ, ಆಶ್ರಯಾಸಿದ್ಧಿದೋಷಗಳು ಬರುತ್ತಿದ್ದವು. ಜಗತ್ಕಾರಣತ್ವವು ರುದ್ರನಲ್ಲಿ ಹೇಗೆ ಪ್ರಸಿದ್ಧವಾಗಿದೆಯೆಂದರೆ ಅನುಮಾನದಿಂದ ಎಂದು ಉತ್ತರಿಸಬೇಕು. ಆದರೆ ಅನುಮಾನವು ಸತ್ಪ್ರತಿಪಕ್ಷಾನುಮಾನದಿಂದ ದುಷ್ಟವಾದ ಕಾರಣ ಶಾಸ್ತ್ರದಿಂದಷ್ಟೇ ಜಗತ್ಕಾರಣತ್ವವು ಸಿದ್ಧವಾಗುತ್ತದೆಂದು ಹೇಳಬೇಕು. ಹೀಗೆ ಹೇಳಿದ್ದರಿಂದ ಮತ್ತೊಂದು ಪ್ರಕಾರದಲ್ಲಿ ಅನುಮಾನವು ರುದ್ರಾದಿಗಳಿಗೆ ಜಗತ್ಕಾರಣತ್ವವನ್ನು ಸಾಧಿಸುವುದೆಂಬುದನ್ನು ನಿರಾಕರಿಸಿ- ದಂತಾಯಿತು.

**अस्तु, शास्त्रेणैव जगत्कारणत्वसिद्धिः । ततः किमिति चेन्न । तर्ह्यनुमानस्य शास्त्रमुपजीव्यं स्यात् । न च तन्निरुद्धजगत्कारणत्वं प्रतिपादयति । तथा च, तच्छास्त्रमेव यज्जगत्कारणमेव प्रतिपादयति, तदेव तथाऽभ्युपगम्यताम् । किमनेनाऽनुमानेन । शास्त्रं च, विष्णुमेव जगत्कारणं प्रतिपादयतीत्यनन्तरमेव वक्ष्याम इति भावः ॥३॥**

ಶಾಸ್ತ್ರದಿಂದ ಜಗತ್ಕಾರಣತ್ವವು ಸಿದ್ಧವಾಗಲಿ. ಇದರಿಂದೇನಾಯಿತು? ಎಂದರೆ ಅನುಮಾನಕ್ಕೆ ಶಾಸ್ತ್ರವು ಉಪಜೀವ್ಯವಾದ್ದರಿಂದ ಪ್ರಬಲವಾಗಿದೆ. ಅಂತಹ ಶಾಸ್ತ್ರವು ನಿರಾಧಾರವಾಗಿ ಜಗತ್ಕಾರಣತ್ವವನ್ನು ಪ್ರತಿಪಾದಿಸಲಾರದು. ಆದ್ದರಿಂದ ಆ ಶಾಸ್ತ್ರವು ಯಾರಲ್ಲಿ ಜಗತ್ಕಾರಣತ್ವವನ್ನು ಪ್ರತಿಪಾದಿಸುತ್ತಿದೆಯೋ ಅದನ್ನೇ ಒಪ್ಪಿಕೊಳ್ಳಬೇಕು. ಉಪಜೀವಕವಾಗಿ ದುರ್ಬಲವಾದ ಅನುಮಾನದಿಂದ ಜಗತ್ಕಾರಣತ್ವವು ಸಿದ್ಧವಾಗುವುದಿಲ್ಲ. ಶಾಸ್ತ್ರವಾದರೋ ವಿಷ್ಣುವನ್ನೇ ಜಗತ್ಕಾರಣನೆಂದು ಪ್ರತಿಪಾದಿಸುತ್ತದೆ. ಈ ವಿಚಾರವನ್ನು ಮುಂದೆ ಹೇಳುವ-ವರಿದ್ದೇವೆ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಶಾಸ್ತ್ರಯೋನಿತ್ವಾಧಿಕರಣವು ಸಮಾಪ್ತವಾಯಿತು.

* * * * * * *

श्रीमदानन्दतीर्थभगवत्पादाचार्यविरचितम्

# न्यायविवरणम्

श्री जयतीर्थविरचिता

# न्यायविवरणपञ्चिका

अथ न्यायविवरणम्

**न च पाशुपतशास्त्रोदितत्वाऽऽदि, शास्त्रप्रतिपाद्यत्वे कारणम् । किं तपूक्रमाऽऽदिलक्षणः समन्वय एव ।। ४ ।।**

ರುದ್ರಾದಿಗಳು ಶಾಸ್ತ್ರಪ್ರತಿಪಾದ್ಯರಾಗಿದ್ದಾರೆನ್ನಲು ಪಾಶುಪತಶಾಸ್ತ್ರೋದಿತತ್ವವು ಕಾರಣವಲ್ಲ; ಹೊರತಾಗಿ ಉಪಕ್ರಮಾದಿ ಷಡ್ವಿಧತಾತ್ಪರ್ಯಲಿಂಗಗಳಿಂದ ಸಿದ್ಧವಾದ ಸಮನ್ವಯವೇ ಕಾರಣವಾಗಿದೆ.

तत्तु समन्वयात् ।। अत्र, कचित्पूर्वपक्षसिद्धान्तन्याययोः पृथग्विवरणं क्रियते । यथा प्रथमाऽधिकरणे । कचित्सिद्धान्तपुरस्कारेण पूर्वपक्षवचनेन, तन्न्यायविवरणपूर्वकं सिद्धान्तन्यायो विव्रियते । यथा द्वितीयाऽधिकरणे । कचित्तु, सिद्धान्तवचनेनैव । यथाऽत्राधिकरणे । तथा हि । शास्त्रं, जगज्जन्माऽदिकारणत्वेन रुद्रादीनां प्रतिपादकम् । पाशुपताऽदिशास्त्रेषु तथोदितत्वात् । यथा हि, ''वेदैश्च सर्वैरहमेव वेद्यः'' इत्यादिशास्त्रबलाद् विष्णोर्वेदादिकं प्रतिपादकमिष्यते । न च पाशुपताद्युक्तेर्नाऽऽश्वासः । अस्मत्प्रतीतिसंवादेनाऽऽश्वासोपपत्तेः । प्रतीयते हि, विदितपदपदार्थसङ्गतीनामस्माकं ''ज्ञात्वा शिवं शान्तिमत्यन्तमेति'' ''हिरण्यगर्भः'' इत्यादौ, रुद्रादीनां जगत्कारणत्वमित्येवं प्राप्ते, प्रतिविधीयते ।। न च पाशुपतेति ।।

ಈ ಅಧಿಕರಣದಲ್ಲಿ ಯಾವರೀತಿಯಾಗಿ ಜಿಜ್ಞಾಸಾಧಿಕರಣದಲ್ಲಿ ಪೂರ್ವಪಕ್ಷನ್ಯಾಯ ಸಿದ್ಧಾಂತನ್ಯಾಯಗಳನ್ನು ಪ್ರತ್ಯೇಕವಾಗಿ ವಿವರಿಸಿದ್ದಾರೋ ಅದರಂತೆ ಇಲ್ಲಿಯೂ ವಿವರಿಸಿದ್ದಾರೆ. ಕೆಲವೊಮ್ಮೆ ಸಿದ್ಧಾಂತವನ್ನು ಮುಂದಿಟ್ಟುಕೊಂಡು ಪೂರ್ವಪಕ್ಷದ ಮಾತಿನಿಂದ ಪೂರ್ವಪಕ್ಷನ್ಯಾಯವನ್ನು ವಿವರಿಸುವ ಮೂಲಕ ಸಿದ್ಧಾಂತನ್ಯಾಯವನ್ನು ವಿವರಿಸುತ್ತಾರೆ. ಇದನ್ನು ಜನ್ಮಾದ್ಯಧಿಕರಣದಲ್ಲಿ ಕಾಣಬಹುದು. ಕೆಲವೆಡೆ ಸಿದ್ಧಾಂತದ ಮಾತಿನಿಂದಲೇ ಸಿದ್ಧಾಂತದ ನ್ಯಾಯವನ್ನು ವಿವರಿಸುತ್ತಾರೆ. ಇದಕ್ಕೆ ಸಮನ್ವಯಾಧಿಕರಣವೇ ಉದಾಹರಣೆಯಾಗಿದೆ. ಅದು ಹೀಗೆ. ಜಗಜ್ಜನ್ಮಾದಿಕಾರಣನೆಂಬುದಾಗಿ ಶಾಸ್ತ್ರವು ರುದ್ರಾದಿಗಳನ್ನು ಪ್ರತಿಪಾದಿಸುತ್ತಿದೆ. ಪಾಶುಪತಾದಿಶಾಸ್ತ್ರಗಳಲ್ಲಿ ಹಾಗೆಯೇ ಸಮರ್ಥಿಸಿದ್ದಾರೆ. ಯಾವರೀತಿಯಾಗಿ 'ವೇದೈಶ್ಚ ಸರ್ವೈರಹಮೇವ ವೇದ್ಯಃ' ಎಂಬ ಗೀತಾಮಾತಿನಂತೆ ವಿಷ್ಣುವಿಗೆ ವೇದಪ್ರತಿಪಾದ್ಯತ್ವವನ್ನು ಅಂಗೀಕರಿಸಲಾಗುತ್ತದೋ ಅದರಂತೆ. (ಈ ವಿಷಯದಲ್ಲಿ ವೇದೈಶ್ಚ ಸರ್ವೈರಹಮೇವ ವೇದ್ಯಃ' ಎಂಬ ಮಾತಿನ ಬಲದಿಂದ ವಿಷ್ಣುವಿಗೆ ವೇದಪ್ರತಿಪಾದ್ಯತ್ವವನ್ನು ಒಪ್ಪಿರುವುದು ದೃಷ್ಟಾಂತವಾಗಿದೆ). ಪಾಶುಪತಾದಿ ಶಾಸ್ತ್ರಗಳ ಮಾತುಗಳನ್ನು ವಿಶ್ವಾಸಕ್ಕೆ ಅನರ್ಹ ಎನ್ನಬಾರದು. ನಮಗೆ ಬರುವ ಜ್ಞಾನವೇ ಈ ವಿಷಯದಲ್ಲಿ ಸಂವಾದಿಯಾಗಿದೆ. ಆದ್ದರಿಂದ ವಿಶ್ವಾಸ ಮಾಡುವುದು ತಪ್ಪಲ್ಲ. ಯಾರಿಗೆ ಪದಪದಾರ್ಥಗಳ ಸಂಬಂಧಜ್ಞಾನವಿರುತ್ತದೋ ಅಂತಹವನಿಗೆ ರುದ್ರನು ಜಗತ್ಕಾರಣನೆಂಬ ಜ್ಞಾನವು ಬಂದೇ ಬರುತ್ತದೆ. 'ಜ್ಞಾತ್ವಾ ಶಿವಂ ಶಾಂತಿಮತ್ಯಂತಮೇತಿ' 'ಹಿರಣ್ಯಗರ್ಭಃ ಸಮವರ್ತತಾತ್ರೇ' ಇತ್ಯಾದಿ ವಾಕ್ಯಗಳನ್ನು ನೋಡಿದಾಗ ರುದ್ರಾದಿಗಳು ಜಗತ್ಕಾರಣರೆಂದು ತಿಳಿಯುತ್ತದೆ. ಇಷ್ಟು ಪೂರ್ವಪಕ್ಷ. ಇದನ್ನು 'ನಚ ಪಾಶುಪತ' ಎಂಬ ಮಾತಿನಿಂದ ನಿರಾಕರಿಸುತ್ತಿದ್ದಾರೆ.

रुद्रो जगत्कारणत्वेन वेदादिशास्त्रप्रतिपाद्य इत्येव, पाशुपतोदितत्वं । आदिपदगृहीताऽस्मत्प्रतीतिश्च, रुद्रस्य जगज्जन्माऽदिकारणत्वेन वेदाऽऽदिशास्त्रप्रतिपाद्यत्वे, कारणं प्रमाणं, न भवति । हिरण्यगर्भादिष्वप्येतदुपलक्षणम् । कुतः । पाशुपतादिशास्त्रे विश्वासकारणाऽऽभावात् । प्रतीतेश्चाऽनैकान्तिकत्वात् । प्रतीतये च क्वचिदाशयादिदोषवशादन्यपरस्याऽपि वाक्यस्याऽन्योऽर्थः । क्वचित्तुल्यवदर्थद्वयम् ।

ಪಾಶುಪತೋದಿತತ್ವವೆಂದರೆ ಜಗತ್ಕಾರಣತ್ವೇನ ರುದ್ರನು ವೇದಪ್ರತಿಪಾದ್ಯನೆಂದಷ್ಟೇ ಅರ್ಥ. 'ಆದಿ'ಪದದಿಂದ ನಮ್ಮ ಅನುಭವವನ್ನು ಇಟ್ಟುಕೊಳ್ಳಬೇಕು. ರುದ್ರನು ಜಗತ್ಕಾರಣತ್ವೇನ ಶಾಸ್ತ್ರಪ್ರತಿಪಾದ್ಯನಾಗಿದ್ದಾನೆನ್ನಲು ಪಾಶುಪತೋದಿತತ್ವವು ಕಾರಣ-ವಾಗುವುದಿಲ್ಲ. (ಪಾಶುಪತಾದ್ಯಾಗಮಗಳಲ್ಲಿ ಹೇಳಲ್ಪಟ್ಟಿರುವಿಕೆಯು) ಹಿರಣ್ಯಗರ್ಭಾದಿ-ಗಳಲ್ಲೂ ಉಪಲಕ್ಷಣಯಾ ಹೀಗೆಯೇ ತಿಳಿಯಬೇಕು. ಏಕೆಂದರೆ ಪಾಶುಪತಾದಿಗಳಲ್ಲಿ ವಿಶ್ವಾಸಮಾಡಲು ಕಾರಣವಿಲ್ಲ. ಮತ್ತೊಂದು ಕಾರಣವೆಂದು ಹೇಳಿದ ಅನುಭವವು ವ್ಯಭಿಚರಿತವಾಗಿದೆ. ಏಕೆಂದರೆ ಅವರವರ ಇಚ್ಛೆಗೆ ತಕ್ಕಂತೆ ಅದೇ ವಾಕ್ಯವು ಮತ್ತೊಂದು ಅರ್ಥವನ್ನು ಹೇಳಬಹುದು. ಕೆಲವೊಮ್ಮೆ ಎರಡೂ ಅರ್ಥವನ್ನು ಹೇಳಬಹುದು. ಆದ್ದರಿಂದ ಅನುಭವವು ಕಾರಣವಾಗದು.

नन्वेवं तर्हि, न शास्त्रतात्पर्यनिर्णयः, प्रसिद्धपुरुषाणां व्याख्यानं प्रतीतिं च विना, प्रमाणान्तराऽभावादित्याक्षिपति ।। **किं त्विति** ।। किं तर्हि शास्त्रतात्पर्यनिर्णये प्रमाणमित्यर्थः । परिहरति ।। **उपक्रमादीति** ।। शास्त्रतात्पर्यानिर्णये कारणमिति सम्बन्धः । उपक्रमादय एवेति वक्तव्ये, यदेवं प्राह तेन नोत्सूत्रं सिद्धान्त इति सूचयति । एतच्च, लौकिक-परीक्षाऽनुभवसिद्धमेव । तथा चोपक्रमाऽऽदितात्पर्यलिङ्गैः सम्यङ्निरूप्यमाणो भगवानेव जगज्जन्मादिकारणत्वेन मुख्यया वृत्त्या सकलवेदाऽऽदिवेद्यः प्रतीयत इति भावः ।। ४ ।।

ಹಾಗಾದಲ್ಲಿ ಶಾಸ್ತ್ರಗಳ ತಾತ್ಪರ್ಯನಿರ್ಣಯವೇ ಅಸಾಧ್ಯ. ಪ್ರಸಿದ್ಧಪುರುಷರ ವ್ಯಾಖ್ಯಾನದಿಂದ ಬರುವ ಜ್ಞಾನವನ್ನು ಅವಲಂಬಿಸಿಯೇ ತಾತ್ಪರ್ಯವನ್ನು ನಿರ್ಣಯಿಸಲಾಗುತ್ತದೆ. ಮತ್ತೊಂದು ಪ್ರಮಾಣವಿರುವುದಿಲ್ಲವೆಂದು ಕಿಂತು ಎಂಬ ಗ್ರಂಥದಿಂದ ಆಕ್ಷೇಪಿಸುತ್ತಿದ್ದಾರೆ. ಹಾಗಾದಲ್ಲಿ ಶಾಸ್ತ್ರತಾತ್ಪರ್ಯವನ್ನು ನಿರ್ಣಯಿಸಲು ಏನು ಪ್ರಮಾಣ? ಎಂದು ಇದರ ಅರ್ಥ. 'ಉಪಕ್ರಮಾದಿಲಕ್ಷಣಯಾ' ಎಂದು ಆಕ್ಷೇಪವನ್ನು ಪರಿಹರಿಸಿದ್ದಾರೆ. ಉಪಕ್ರಮಾದಿಗಳು ಶಾಸ್ತ್ರತಾತ್ಪರ್ಯನಿರ್ಣಯಕ್ಕೆ ಕಾರಣಗಳಾಗಿವೆ ಎಂದು ಯೋಜನೆ ಮಾಡಿಕೊಳ್ಳಬೇಕು. ''ಏವ''ಕಾರವನ್ನು ಗ್ರಂಥಕಾರರು ಉಪಯೋಗಿಸಬೇಕಿತ್ತು.

ಆದರೆ ಹಾಗೆ ಹೇಳದಿರಲು ಉತ್ಸೂತ್ರಿತವಾಗಬಾರದೆಂಬುದೇ ಕಾರಣವಾಗಿದೆ. ಈ ವಿಚಾರವು ಲೌಕಿಕಜ್ಞಾನಿಗಳ ಅನುಭವದಿಂದಲೂ ಸಿದ್ಧವಾಗಿದೆ. ಆದ್ದರಿಂದ ಉಪಕ್ರಮಾದಿಷಡ್ವಿಧ ತಾತ್ಪರ್ಯಲಿಂಗಗಳಿಂದ ಯಥಾರ್ಥವಾಗಿ ಪ್ರತಿಪಾದ್ಯನಾದ ವಿಷ್ಣುವೇ ಜಗಜ್ಜನ್ಮಾದಿ-ಕಾರಣನಾಗಿ ಮುಖ್ಯವೃತ್ತಿಯಿಂದ ಸಕಲವೇದಪ್ರತಿಪಾದ್ಯನಾಗಿ ತಿಳಿಯಲ್ಪಡುತ್ತಾನೆಂದು ಹೃದಯ.

ಶ್ರೀಜಯತೀರ್ಥಭಿಕ್ಷುಗಳಿಂದ ರಚಿತವಾದ ನ್ಯಾಯವಿವರಣಟೀಕೆಯ
ಕನ್ನಡಾನುವಾದದಲ್ಲಿ ಸಮನ್ವಯಾಧಿಕರಣವು ಸಮಾಪ್ತವಾಯಿತು.

* * * * * * *

# ವಿಷಯಾನುಕ್ರಮಣಿಕೆ

## ಜಿಜ್ಞಾಸಾಧಿಕರಣ

## ಜನ್ಮಾಧಿಕರಣ

## ಶಾಸ್ತ್ರಯೋನಿತ್ವಾಧಿಕರಣ

## ಸಮನ್ವಯಾಧಿಕರಣ

ಅಸ್ಮದ್ಗುರ್ವಂತರ್ಗತ-ಶ್ರೀಮದ್-ರಾಘವೇಂದ್ರತೀರ್ಥಗುರುರ್ವಂತರ್ಗತ-ಶ್ರೀಮದ್-ಹನುಮ-ಭೀಮ-ಮಧ್ವಾಂತರ್ಗತ-ರಾಮ-ಕೃಷ್ಣ-ವೇದವ್ಯಾಸಾತ್ಮಕ-ಶ್ರೀಲಕ್ಷ್ಮೀಹಯಗ್ರೀವಃ ಪ್ರೀಯತಾಮ್ ॥

॥ಶ್ರೀ ಮಧ್ವೇಶಾರ್ಪಣಮಸ್ತು ॥

ಜಯ ಶ್ರೀರಾಘವೇಂದ್ರ ಗುರೋ !!





ವೇದವೆಂಬ ಭೂಮಿಯಲ್ಲಿ ಭಗವಾನ್ ವ್ಯಾಸರು
ಬ್ರಹ್ಮಸೂತ್ರವೆಂಬ ಬೀಜವನ್ನು ಬಿತ್ತಿದರು.
ಶ್ರೀಮಧ್ವಾಚಾರ್ಯರ ಭಾಷ್ಯದಿಂದ ಹೊಳೆಯುವ
ಮೊಳಕೆ ಹುಟ್ಟಿತು.
ಪ್ರಾಚೀನರ ವ್ಯಾಖ್ಯಾನಗಳಿಂದ ಕಿಂಚಿತ್ ಕವಲುಗಳು ಕಂಡವು.
ಶ್ರೀ ಜಯತೀರ್ಥರ ಟೀಕೆಗಳಿಂದ ಗಟ್ಟಿಮುಟ್ಟಾದ ಶಾಖೆಗಳು ಮೂಡಿದವು.
ಶ್ರೀ ವ್ಯಾಸರಾಜರ ಟಿಪ್ಪಣಿಗಳಿಂದ ಕಿಸಲಯವಾಯಿತು
ಶ್ರೀವಿಜಯೀಂದ್ರರ ವಿವರಣೆಗಳಿಂದ ಪುಷ್ಪಗಳು ಪುಟಿದೆದ್ದವು.
ಇಂದು ಶ್ರೀ ರಾಘವೇಂದ್ರಗುರುಸಾರ್ವಭೌಮರ
ಅಮೃತಮಯ ಕೃತಿಗಳಿಂದ ಫಲಗಳುಂಟಾಗಿ
ಮಧ್ವಸಿದ್ಧಾಂತವೆಂಬ ಮಹಾವೃಕ್ಷವು
ಸೊಭಗಿನಿಂದ ಕಂಗೊಳಿಸುತ್ತಿದೆ.

ಸ್ಫೂರ್ತಿ - ಗುರುಗುಣಸ್ತವನ

ಪ್ರಕಾಶನ
ಶ್ರೀ ಗುರುಸಾರ್ವಭೌಮ ಸಂಶೋಧನಾ ಮಂದಿರ, ಮಂತ್ರಾಲಯ